# ಕಡೆಂಗೋಡ್ಲು ಶಂಕರ ಭಟ್ಟರ ಕಥನ ಕವನಗಳು-ಒಂದು ಅಧ್ಯಯನ

ಕನ್ನಡದಲ್ಲಿ ಎಂ.ಫಿಲ್ ಪದವಿಗಾಗಿ ಹಂಪಿ ಕನ್ನಡ
ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ನಿಬಂಧ

<u>ಮಾನ್ಯತಾ ಸಂಸ್ಥೆ</u>

ಕರ್ನಾಟಕ ತಿಯೊಲಾಜಿಕಲ್ ಸಂಶೋಧನಾ ಕೇಂದ್ರ ಬಲ್ಮಠ-
ಮಂಗಳೂರು ದ.ಕ.


ಸಂಶೋಧಕರು

ಸಂತೋಷ್ ಆಳ್ವ

ಮಾರ್ಗದರ್ಶಕರು:

ಡಾ। ಗಿರೀಶ್ ಭಟ್ ಎ.,
ಸಹಪ್ರಾಧ್ಯಾಪಕರು
ಸರಕಾರಿ ಪ್ರಥಮ ದರ್ಜೆ ಕಾಲೇಜು, ಬಂಟ್ವಾಳ
ಮಂಗಳೂರು, ದ.ಕ.





ಕನ್ನಡ ವಿಶ್ವವಿದ್ಯಾನಿಲಯ, ಹಂಪಿ
ವಿದ್ಯಾರಣ್ಯ - ೫೮೩.೨೭೬
ಜುಲೈ - ೨೦೧೩

# ಕಡೆಂಗೋಡ್ಲು ಶಂಕರ ಭಟ್ಟರ ಕಥನ ಕವನಗಳು-ಒಂದು ಅಧ್ಯಯನ

ಕನ್ನಡದಲ್ಲಿ ಎಂ.ಫಿಲ್ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ನಿಬಂಧ

ಮಾನ್ಯತಾ ಸಂಸ್ಥೆ

ಕರ್ನಾಟಕ ತಿಯೊಲಾಜಿಕಲ್ ಸಂಶೋಧನಾ ಕೇಂದ್ರ ಬಲ್ಮಠ-
ಮಂಗಳೂರು ದ.ಕ.

**ಸಂಶೋಧಕರು**

**ಸಂತೋಷ್ ಆಳ್ವ**

**ಮಾರ್ಗದರ್ಶಕರು:**

**ಡಾ। ಗಿರೀಶ್ ಭಟ್ ಎ.,**

ಸಹಪ್ರಾಧ್ಯಾಪಕರು
ಸರಕಾರಿ ಪ್ರಥಮ ದರ್ಜೆ ಕಾಲೇಜು, ಬಂಟ್ವಾಳ
ಮಂಗಳೂರು, ದ.ಕ.

**ಕನ್ನಡ ವಿಶ್ವವಿದ್ಯಾನಿಲಯ, ಹಂಪಿ**

ವಿದ್ಯಾರಣ್ಯ – ೫೮೩೨೭೬

ಜುಲೈ – ೨೦೧೩

# ದೃಢೀಕರಣ ಪತ್ರ

**ಕಡೆಂಗೋಡ್ಲು ಶಂಕರ ಭಟ್ಟರ 'ಕಥನ ಕವನಗಳು – ಒಂದು ಅಧ್ಯಯನ'** ಇದು ನಾನು ಮಂಗಳೂರು ಬಲ್ಮಠದ ಕರ್ನಾಟಕ ತಿಯೊಲಾಜಿಕಲ್ ಸಂಶೋಧನಾ ಕೇಂದ್ರದಲ್ಲಿ ಡಾ। ಗಿರೀಶ್ ಭಟ್ ಎ. ಇವರ ಮಾರ್ಗದರ್ಶನದಲ್ಲಿ ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸಿದ್ಧ ಪಡಿಸಿದ ನಿಬಂಧವಾಗಿರುತ್ತದೆ. ಇದು ನನ್ನ ಮೂಲ ಮತ್ತು ಸ್ವತಂತ್ರ ರಚನೆಯಾಗಿದ್ದು, ಇದರ ಯಾವುದೇ ಭಾಗ ಎಲ್ಲೂ ಪ್ರಕಟವಾಗಿಲ್ಲ ಮತ್ತು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಮಂಗಳೂರು
ಜುಲೈ ೨೦೧೩

ಸಂತೋಷ್ ಆಳ್ವ
(ಸಂಶೋಧಕರು)

# ಪ್ರಮಾಣ ಪತ್ರ

**ಕಡೆಂಗೋಡ್ಲು ಶಂಕರ ಭಟ್ಟರ 'ಕಥನ ಕವನಗಳು – ಒಂದು ಅಧ್ಯಯನ'** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಎಂ.ಫಿಲ್ ಪದವಿಗಾಗಿ ಸಂತೋಷ್ ಆಳ್ವ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಈ ನಿಬಂಧವು ಮೂಲರೂಪವಾಗಿದ್ದು, ಇದರ ಯಾವುದೇ ಭಾಗ ಎಲ್ಲೂ ಪ್ರಕಟವಾಗಿಲ್ಲ ಮತ್ತು ಈ ಮೊದಲು ಯಾವುದೇ ಪದವಿಗಾಗಿ ಇದನ್ನು ಸಲ್ಲಿಸಿರುವುದಿಲ್ಲ ಎಂಬುವುದಾಗಿ ಈ ಮೂಲಕ ಪ್ರಮಾಣೀಕರಿಸುತ್ತೇನೆ

ಬಂಟ್ವಾಳ, ಮಂಗಳೂರು

ಜುಲೈ – ೨೦೧೩

**ಡಾ। ಗಿರೀಶ್ ಭಟ್ ಎ.**

**(ಮಾರ್ಗದರ್ಶಕರು)**

# ಅನುಕ್ರಮಣಿಕೆ

# ಅಧ್ಯಾಯ – ೧

## "ಕಡೆಂಗೋಡ್ಲು ಶಂಕರ ಭಟ್ಟರ ಕಥನಕವನಗಳು" ಒಂದು ಅಧ್ಯಯನ

**ಪೀಠಿಕೆ :**

ಕನ್ನಡ ಸಾಹಿತ್ಯವು ಕಾಲದಿಂದ ಕಾಲಕ್ಕೆ ತನ್ನ ಗತಿಯನ್ನು ಬದಲಿಸುತ್ತಾ ಬಂದಿದ್ದು ಚಂಪೂ ಶೈಲಿಯಿಂದ ವಚನ ಶೈಲಿಗೆ, ಷಟ್ಪದಿಯಿಂದ ಸಾಂಗತ್ಯದ ಶೈಲಿಗೆ ನವೋದಯಕಾಲದಲ್ಲಿ ಇಂಗ್ಲೀಷ್ ಕಾವ್ಯಗಳ ಪ್ರಭಾವದಿಂದ ಮುಕ್ತಕಗಳ ಶೈಲಿಗೆ ಮತ್ತು ಭಾವಗೀತೆಗಳ ಶೈಲಿಗೆ ಹೊರಳಿದ್ದನ್ನು ಕಾಣುತ್ತೇವೆ.

ಒಬ್ಬ ಪ್ರತಿಭಾವಂತ ಕವಿ ಆ ಕಾಲಕ್ಕೆ ಕ್ಲೀಷೆಯಾಗುತ್ತಿರುವ ಸಾಹಿತ್ಯಕ್ಕೆ ಒಂದು ಹೊಸ ಶೈಲಿಯನ್ನು ನಿರ್ಮಿಸಿಕೊಡುತ್ತಾನೆ. ಹೊಸ ಅಭಿವ್ಯಕ್ತಿಯನ್ನು ಸಿದ್ಧಪಡಿಸುತ್ತಾನೆ. ಇದು ಭಾಷೆಯಿಂದಾಗಬಹುದು, ಅನುಭವದಿಂದಾಗಬಹುದು ಇಲ್ಲವೇ ಛಂದಸ್ಸಿನಿಂದಾಗಬಹುದು ಅಥವಾ ಈ ಮೂರೂ ಸಾಧ್ಯತೆಗಳನ್ನು ಬಳಸಿಕೊಂಡು ಇಡೀ ಕಾವ್ಯಲೋಕಕ್ಕೆ ಹೊಸ ಕೊಡುಗೆ ನೀಡಬಹುದು. ಹೀಗಾಗಿ ಕಾಲದಿಂದ ಕಾಲಕ್ಕೆ ಕಾವ್ಯದ ಸ್ವರೂಪ ಬದಲಾಗಲು ದೇಶ–ಕಾಲಗಳು ಕಾರಣವಾದಂತೆ ಪ್ರತಿಭಾವಂತ ಕವಿಗಳು ಕಾರಣರಾಗುತ್ತಾರೆ.

ಇದರೊಂದಿಗೆ ಕವಿ ಪ್ರಯೋಗಿಸುವ ಹೊಸತನ ಹೊಸ ತಿಳಿವು ಕಾವ್ಯದ ಸ್ವರೂಪಕ್ಕೆ ಕಾಯಕಲ್ಪ ಮಾಡಿದಂತಾಗಿ ಕಾವ್ಯ ಮತ್ತೆ ತನ್ನ ಸೋಪಜ್ಞತೆಯಿಂದ, ಲವಲವಿಕೆಯಿಂದ ಹಾಗೂ ಅನುಭವಗಳ ಸತ್ಯದಿಂದ ಹೊಸ ಸಂವೇದನೆಗೆ ತೆರೆದುಕೊಳ್ಳುತ್ತದೆ.

ಕನ್ನಡ ಭಾಷೆಯ, ಸಾಹಿತ್ಯದ ಬೆಳವಣಿಗೆಗೆ ಮಹತ್ತರ ಕೊಡುಗೆ ನೀಡಿದ ಕವಿಗಳು ಹಾಗೂ ಅವರ ಕೃತಿಗಳ ಅಧ್ಯಯನವು ಈ ವಿದ್ಯುನ್ಮಾನ ಯುಗದಲ್ಲಿ ಭಾಷೆ, ಸಾಹಿತ್ಯ, ಸಂಸ್ಕೃತಿಯನ್ನು ಗ್ರಹಿಸಬಲ್ಲ ಹೊಸ ಒಳನೋಟಗಳನ್ನು ನೀಡಬಲ್ಲದು. ಕಾವ್ಯ ಪರಂಪರೆಯಲ್ಲಿ ಕಥನ ಕವನಗಳಿಗೆ ವಿಶಿಷ್ಟ ಸ್ಥಾನವಿದೆ. ಸರಳ ರಗಳೆಯನ್ನು ಕಥೆ ಹೇಳಲೆಂದೇ ನಿರ್ಮಿಸಿಕೊಂಡದ್ದು ಕಥನಕವನದ ಒಂದು ದೊಡ್ಡ ಸಾಧನೆ. ಕವಿ ಕಡೆಂಗೋಡ್ಲು ಶಂಕರ ಭಟ್ಟರೂ ಪತ್ರಕರ್ತರಾಗಿ, ಅಧ್ಯಾಪಕರಾಗಿ ಕಾರ್ಯನಿರ್ವಹಿಸಿದವರು. ಕನ್ನಡದ ನವೋದಯ ಕಾಲದಲ್ಲಿ ಬೆಳಕಿಗೆ ಬಂದ ಕವಿ ಕಡೆಂಗೋಡ್ಲು ಶಂಕರ ಭಟ್ಟರು. ಕನ್ನಡದ ಕಥನ ಕವನ ಪರಂಪರೆಗೆ ಅವರದು ವಿಶಿಷ್ಟ ಕೊಡುಗೆ. ೧೯೩೭ ರಲ್ಲಿ ಬಂದ 'ನಲ್ಮೆ' ಮೂರು ನೀಳ್ಗವಿತೆಗಳ ಸಂಕಲನ,

ಕತೆಗಾರರಾಗಿ, ನಾಟಕಕಾರರಾಗಿ, ಕಾದಂಬರಿಕಾರರಾಗಿ, ಪ್ರಬಂಧಕಾರರಾಗಿ, ಪತ್ರಿಕೋದ್ಯಮಿಯಾಗಿ ಸಾಹಿತ್ಯವನ್ನೊಲಿದ ವ್ಯಕ್ತಿ ಏನೇನು ಮಾಡಬಹುದೋ ಅದನ್ನೆಲ್ಲಾ ಕಡೆಂಗೋಡ್ಲು ಶಂಕರ ಭಟ್ಟರು ಮಾಡಿದ್ದಾರೆ.

ಕಥನ ಕವನಗಳ ಮೂಲಕವೇ ಕೊಡುಗೆ ನೀಡಿದ ಹಿರಿಯಕವಿಗಳಲ್ಲಿ ಕಡೆಂಗೋಡ್ಲು ಶಂಕರ ಭಟ್ಟರು ಒಬ್ಬರು. ಆದ್ದರಿಂದ ಅವರ ಕಥನಕವನಗಳನ್ನು ಅಧ್ಯಯನ ಮಾಡುವುದು ಅಗತ್ಯವೆನಿಸುತ್ತದೆ. ಕವಿಯ 'ಹೊನ್ನಿಯ ಮದುವೆ', 'ಹೆಣ್ಣು', 'ಮುರಲೀನಾದ', 'ಭೂತಾಳಪಾಂಡ್ಯ' ಹಾಗೂ 'ಮಾದ್ರಿಯ ಚಿತೆ' ಈ ಕಥನಕವನಗಳನ್ನು ಪ್ರಬಂಧದಲ್ಲಿ ಅಧ್ಯಯನ ಮಾಡಲಾಗಿದೆ.

ಕಡೆಂಗೋಡ್ಲು ಶಂಕರಭಟ್ಟರ ಕಥನಕವನಗಳಿಗೆ ಸಂಬಂಧಿಸಿದಂತೆ ಪತ್ರಿಕೆಗಳ ಪುರವಣಿಗಳಲ್ಲಿ ಹಾಗೂ ಅಭಿನಂದನಾ ಗ್ರಂಥಗಳಲ್ಲಿ ಬಿಡಿಬಿಡಿಯಾಗಿ ಕೆಲವು ಲೇಖನಗಳು ಪ್ರಕಟವಾಗಿರುವುದು ಹೊರತುಪಡಿಸಿದರೆ ವಿಸ್ತೃತವಾದ ಯಾವುದೇ ಗಂಭೀರ ಅಧ್ಯಯನಗಳು ಈವರೆಗೆ ನಡೆದಿಲ್ಲ. ಆದುದರಿಂದ ಈ ಅಧ್ಯಯನವು ಪ್ರಸ್ತುತವೆನಿಸುತ್ತದೆ. ಕಡೆಂಗೋಡ್ಲು ಅವರ ಕವನಗಳು ಮುಖ್ಯವಾಗಿ ಸ್ತ್ರೀಯನ್ನೇ ಕೇಂದ್ರವಾಗಿ ಹೊಂದಿವೆ. ಹೀಗಾಗಿ ಹೊಸಗನ್ನಡ ಕಾವ್ಯವು ಗಟ್ಟಿಗೊಳ್ಳುತ್ತಿದ್ದ ಕಾಲಘಟ್ಟದಲ್ಲಿ ಅವರು ಹೆಣ್ಣಿನ ಸಂವೇದನೆಯನ್ನು ಚಿತ್ರಿಸಿದ ಬಗೆಯನ್ನು ಅರ್ಥ ಮಾಡಿಕೊಳ್ಳುವುದು ಮುಖ್ಯವೆನಿಸುತ್ತದೆ.

ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲೂ ಕೃಷಿ ಮಾಡಿದ ಕಡೆಂಗೋಡ್ಲು ಶಂಕರ ಭಟ್ಟರ ಕಥನ ಕವನಗಳನ್ನು ಅಧ್ಯಯನ ಮಾಡುವುದಕ್ಕೆ ಹಿನ್ನೆಲೆಯಾಗಿ ಅಧ್ಯಯನದ ಮಹತ್ವ ವ್ಯಾಪ್ತಿ ವಿಧಾನ ಮುಂತಾದ ಅಂಶಗಳನ್ನು ಈ ಅಧ್ಯಾಯದಲ್ಲಿ ಸ್ಪಷ್ಟಪಡಿಸಿಕೊಳ್ಳಲಾಗಿದೆ.

ಕನ್ನಡ ಸಾಹಿತ್ಯವು ನಿತ್ಯ ಚಲನಶೀಲವಾದದ್ದು, ಕಾಲದಿಂದ ಕಾಲಕ್ಕೆ ಹೊಸ ಹೊಸ ರೂಪಗಳನ್ನು ಪಡೆಯುತ್ತ ಬೆಳೆದು ಬಂದಿದೆ. ಚಂಪೂ, ರಗಳೆ, ಷಟ್ಪದಿ, ಸಾಂಗತ್ಯ ಕೀರ್ತನೆ ಇತ್ಯಾದಿಗಳೆಲ್ಲವೂ ಕನ್ನಡ ಕಾವ್ಯದ ವಿವಿಧ ರೂಪಗಳಾಗಿ ಚರಿತ್ರೆಯಲ್ಲಿ ಕಾಣಿಸಿಕೊಂಡರೆ ಹೊಸಗನ್ನಡದಲ್ಲಿ ಹಲವು ಪ್ರಕಾರಗಳು ಹೊಸದಾಗಿ ರೂಪುಗೊಂಡವು.

ಕಥನಕವನಗಳೂ ಕೂಡಾ ಹೊಸಗನ್ನಡ ಸಾಹಿತ್ಯದ ಒಂದು ರೂಪ. ಪದ್ಯರೂಪದ ಕತೆ. ಕನ್ನಡ ಸಾಹಿತ್ಯವನ್ನು ಅವಲೋಕಿಸಿದಾಗ ಪದ್ಯರೂಪದಲ್ಲಿ ಕತೆ ಹೇಳುವುದು ಹಿಂದಿನಿಂದಲೂ ನಡೆದು ಬಂದಿದೆ. ಸುಮಾರು ೧೮ನೇ ಶತಮಾನದಲ್ಲಿ ರಚನೆಗೊಂಡ 'ಗೋವಿನ ಕಥೆ' ಚೌಪದಿಯ ಛಂದಸ್ಸಿನಲ್ಲಿರುವ ಉತ್ತಮ ಕಥನ ಕವನ. ಅನಾವಶ್ಯಕವಾದ ಯಾವ ವರ್ಣನೆಗೂ ಅವಕಾಶಕೊಡದೆ ನೇರವಾಗಿ ಕತೆಯನ್ನು ಆರಂಭಿಸುವುದು ಕಥನ ಕವನದ ಲಕ್ಷಣ.

ಅದೇ ರೀತಿ ಎರಡನೇ ಅಧ್ಯಾಯದಲ್ಲಿ ಕಥನಕವನಗಳೆಂದರೇನು? ಓನ್ನೆಲ್ಲ, ಸ್ವರೂಪದ ಕುರಿತು ಚರ್ಚಿಸಲಾಗಿದೆ. ಆಂಗ್ಲಸಾಹಿತ್ಯದ ಪ್ರಭಾವದಿಂದಾಗಿ ಕನ್ನಡದಲ್ಲೂ ಕಥನ ಕವನಗಳು ಬೆಳೆದುಬಂದವು. ಹಾಗಾಗಿ ಕನ್ನಡ ಸಾಹಿತ್ಯದ ಮೇಲೆ ಆಂಗ್ಲ ಸಾಹಿತ್ಯದಿಂದಾದ ಪ್ರಭಾವ ಪ್ರೇರಣೆಗಳನ್ನು ಕುರಿತಂತೆ ವಿವರಿಸಲಾಗಿದೆ. ಗದ್ಯ ಹಾಗೂ ಸಾಹಿತ್ಯದ ಇತರ ಪ್ರಕಾರಗಳಿಗಿರುವ ವ್ಯತ್ಯಾಸ ಮತ್ತು ಕಥನಕವನಗಳ ವಿಶೇಷತೆಯನ್ನು ಚರ್ಚಿಸಲಾಗಿದೆ.

ಪಂಜೆಯವರಿಂದ ಮೊದಲುಗೊಂಡು ಮುಂದಿನ ನಾಲ್ಕುದಶಕಗಳವರೆಗೆ (೧೯೦೦ ರಿಂದ ೧೯೪೦) ದಕ್ಷಿನ ಕನ್ನಡದ ಕಾವ್ಯದ ಮೊದಲ ಘಟ್ಟ ಎಂದು ಪರಿಗಣಿಸಬಹುದು. ಇದು ನವೋದಯ ಕಾವ್ಯ ಮಾರ್ಗವು ಉಚ್ಚ್ರಾಯ ಸ್ಥಿತಿಯಲ್ಲಿದ್ದ ಕಾಲ. ಈ ಕಾಲದಲ್ಲಿ ಹೊಸ ಪ್ರಯೋಗಗಳು ನಡೆದು ಹೊಸ ಕಾವ್ಯವು ಸಿದ್ಧರೂಪವನ್ನೇ ಮುಟ್ಟಿತ್ತು. ಗಾಂಧೀಜಿಯವರ ಸ್ವಾತಂತ್ರ್ಯ ಸಂಗ್ರಾಮದ ಪ್ರಭಾವ ಇಲ್ಲಿ ನೇರವಾಗಿತ್ತು. ರಾಷ್ಟ್ರೀಯ ಪ್ರಜ್ಞೆ ಮಾನವತಾವಾದಿ ಸಿದ್ಧಾಂತ, ಆದರ್ಶಪ್ರಿಯತೆ, ನಾಡುನುಡಿಯ ಬಗೆಗಿನ ಭಾವುಕ ಪ್ರೀತಿ, ಮುಂತಾದವು ಈ ಕಾಲದ ಕಾವ್ಯದಲ್ಲಿನ ನಿಲುವುಗಳಾಗಿದ್ದವು. [೧]

ಕಡೆಂಗೋಡ್ಲು ಶಂಕರ ಭಟ್ಟರ ಕಥನಕವನಗಳಲ್ಲಿ ಮುಖ್ಯ ಪಾತ್ರ ಹೆಣ್ಣಿನದೆ. ಮೂರನೇ ಅಧ್ಯಾಯದಲ್ಲಿ ಕಥನಕವನಗಳಲ್ಲಿ ಸ್ತ್ರೀ ಸಂವೇದನೆ ಹೇಗೆ ಮೂಡಿದೆ ಎಂಬ ವಿಷಯದ ಕುರಿತಾದ ಚರ್ಚೆಯಿದೆ. ಈ ಭಾಗದಲ್ಲಿ ಪುರುಷ ಕೇಂದ್ರೀಕೃತ ಸಮಾಜದಲ್ಲಿ ಸ್ತ್ರೀಯ ಸ್ಥಾನಮಾನ, ಅಂತರಾಳ, ಒಳಧ್ವನಿ, ವ್ಯಂಗ್ಯವಾಗಿ ಹೇಗೆ ಮೂಡಿದೆ ಎನ್ನುವುದನ್ನು ತಿಳಿಯುವುದರೊಂದಿಗೆ ಹಿಂದಿನ ಸಾಹಿತ್ಯವು ಸ್ತ್ರೀತ್ವವನ್ನು ಹೇಗೆ ಸೆರೆ ಹಿಡಿದಿದೆ, ಸ್ತ್ರೀ ಸಂವೇದನೆಯನ್ನು ಆದರ್ಶರೂಪವಾಗಿ ಮತ್ತು ವಾಸ್ತವರೂಪವಾಗಿ ಹೇಗೆ ಗ್ರಹಿಸಿದೆ ಎನ್ನುವುದನ್ನು ಸ್ಥೂಲವಾಗಿ ವಿವಿಧ ಕಥನಕವನಗಳ ಪಾತ್ರ ವಿವೇಚನೆಯೊಂದಿಗೆ ಅಧ್ಯಯನ ಮಾಡಲಾಗಿದೆ. ಕಳೆದ ಸುಮಾರು ಮೂವತ್ತು ವರ್ಷಗಳಿಂದ ಕನ್ನಡ ವಿಮರ್ಷಾ ಕ್ಷೇತ್ರದಲ್ಲಿ ಪ್ರಚಲಿತವಾಗಿರುವ ಸ್ತ್ರೀವಾದಿ ಚಿಂತನೆಯನ್ನು ಅವಲೋಕಿಸಲಾಗಿದೆ.

ಕಡೆಂಗೋಡ್ಲು ಶಂಕರ ಭಟ್ಟರ ಕಥನಕವನಗಳಲ್ಲಿ ಒಡಮೂಡಿದ ಮೌಲ್ಯಗಳೇನು? ಯಾವ ರೀತಿಯಲ್ಲಿ ಅವು ಪ್ರತಿಪಾದಿಸಲ್ಪಟ್ಟಿವೆ ಅವು ನೀಡುವ ಸಂದೇಶವೇನು? ಪರಿಣಾಮಗಳೇನು ಎನ್ನುವುದನ್ನು ತಿಳಿಸುವುದರೊಂದಿಗೆ ವ್ಯಕ್ತಿಗತ – ಕೌಟುಂಬಿಕ, ಸಾಮಾಜಿಕ – ಧಾರ್ಮಿಕ ಹೀಗೆ ಒಟ್ಟಂದದಲ್ಲಿ ಜೀವನ ಮೌಲ್ಯಗಳನ್ನು ಕುರಿತಂತೆ ಅಧ್ಯಾಯ ನಾಲ್ಕರಲ್ಲಿ ಸಮಗ್ರವಾಗಿ ಚರ್ಚಿಸಲಾಗಿದೆ. ಅದೇ ರೀತಿ ಅಧ್ಯಾಯ ಐದರಲ್ಲಿ ಕಥನಕವನಗಳ ಸ್ವರೂಪ ಛಂದಸ್ಸು, ಬಳಕೆಯಾದ ಷಟ್ಪದಿ, ಭಾಷಾ ಶೈಲಿ, ನಿರೂಪಣಾ ಕ್ರಮ, ಪ್ರಾಸ ಇತ್ಯಾದಿ ಅಂಶಗಳನ್ನು ಪರಿಶೀಲಿಸಲಾಗಿದೆ.

ಒಟ್ಟಂದದಲ್ಲಿ ಈ ಅಧ್ಯಯನದಲ್ಲಿ ಕಡೆಂಗೋಡ್ಲು ಕಥನಕವನಗಳಲ್ಲಿ ಮೂಡಿದ ಸ್ತ್ರೀಸಂವೇದನೆಯ ಔಚಿತ್ಯ, ಪರಂಪರೆ, ಪುರಾಣಪ್ರಜ್ಞೆ, ಆಧುನಿಕತೆಕಗಳು ಕಥನಕವನಗಳಲ್ಲಿ ಮೂಡಿದ ರೀತಿ ಕಥನಕವನಗಳು ಬಿಂಬಿಸುವ ಮೌಲ್ಯಗಳನ್ನು ವಿವೇಚಿಸಲಾಗಿದೆ.

**ಟಿಪ್ಪಣಿ :-**

1. ಸತ್ಯನಾರಾಯಣ ಮಲ್ಲಿಪಟ್ಟಣ ಪುಟ – ೧೮ ದಕ್ಷಿಣ ಕನ್ನಡದ ಕಾವ್ಯ ಮತ್ತು ಪ್ರಾದೇಶಿಕತೆ ಪ್ರಸಾರಾಂಗ – ಮಂಗಳೂರು ವಿಶ್ವವಿದ್ಯಾನಿಲಯ ೧೯೯೯

# ಅಧ್ಯಾಯ - ೨

## ಕಥನ ಕವನಗಳು - ಹಿನ್ನೆಲೆ - ಸ್ವರೂಪ

ಕನ್ನಡ ಸಾಹಿತ್ಯ ಪರಂಪರೆಯನ್ನು ಅವಲೋಕಿಸಿದಾಗ ಪುರಾಣ, ಚರಿತ್ರೆ, ಕಥೆ, ಇತಿಹಾಸಗಳು ಕವಿಗಳ ಸೃಜನಶೀಲತೆಯಿಂದ ವಿಭಿನ್ನ ರೂಪದಲ್ಲಿ ಮೂಡಿ ಬಂದು ಸಹೃದಯರನ್ನು ತಲುಪಿರುವುದನ್ನು ಕಾಣುತ್ತೇವೆ.

ಸಾಹಿತಿಗಳು ವಿಭಿನ್ನ ಪ್ರಕಾರಗಳ ಮೂಲಕ ತಮ್ಮ ಸೃಜನಶೀಲತೆಯನ್ನು ಪ್ರಸ್ತುತ ಪಡಿಸುತ್ತಾರೆ. ಕಾವ್ಯ ಕೀರ್ತನೆ, ಕಥೆ, ಕವನ, ಗದ್ಯ ಇವೆಲ್ಲವೂ ಕೂಡಾ ಅಭಿವ್ಯಕ್ತಿ ಮಾಧ್ಯಮಗಳೆ. ಕಾವ್ಯ ಪ್ರಕಾರದಲ್ಲಿ ಕಥನಕವನವು ಒಂದು ವಿಶಿಷ್ಟ ರೀತಿಯ ನಿರೂಪಣೆಯಾಗಿ ಕನ್ನಡದಲ್ಲಿ ಬೆಳೆದು ಬಂದಿದೆ. ಕಥೆ ಹೇಳಲು ಪದ್ಯ ಪ್ರಕಾರವನ್ನು ಬಳಸುವ ರೂಢಿ ಕನ್ನಡದಲ್ಲಿ ಹಿಂದಿನಿಂದಲೇ ಬೆಳೆದುಬಂದುದನ್ನು ಕಾಣುತ್ತೇವೆ. ದೀರ್ಘ ಕಾವ್ಯಗಳಲ್ಲದೆ - ಕೀರ್ತನೆಯಂಥ ರಚನೆಗಳೂ ಕಥಾ ಸಾರವನ್ನು ಕೆಲವೊಮ್ಮೆ ಸಂಕ್ಷಿಪ್ತವಾಗಿ ನೀಡಿದುದುಂಟು. ಜನಪದ ಸಾಹಿತ್ಯದಲ್ಲಂತೂ ಕವನ ರೂಪದ ಕಥೆಗಳು ಬಹಳಷ್ಟಿವೆ.

ಕನ್ನಡದಲ್ಲಿ ಕಥನಕವನಗಳು ಬೆಳೆದುಬಂದ ಹಿನ್ನೆಲೆಯನ್ನು ವಿವರಿಸಿಕೊಳ್ಳಲು ಈ ಮುಂದಿನ ಭಾಗದಲ್ಲಿ ಯತ್ನಿಸಲಾಗಿದೆ.

ಕವಿಯೊಬ್ಬನ ಕನಸು, ಕಲ್ಪನೆ ಅನಿಸಿಕೆ ಭಾವನೆ ಅಥವಾ ಅನುಭವಗಳು ಸುಂದರವಾದ ಭಾಷೆಯಲ್ಲಿ ಸುಸಂಬದ್ಧವಾಗಿ ಮತ್ತು ಛಂದೋಬದ್ಧವಾಗಿ ಅಭಿವ್ಯಕ್ತಗೊಳ್ಳುವುದೇ ಪದ್ಯ. ಪದ್ಯವು ಸೃಜನಶೀಲ ಮತ್ತು ಕಲಾತ್ಮಕ ಅಭಿವ್ಯಕ್ತಿಯಾಗಿದ್ದು ಭಾಷೆಯ ರಚನೆಯ ಚಮತ್ಕಾರ ಮತ್ತು ನಿರೂಪಣಾ ಕ್ರಮವು ಆಕರ್ಷಕ ಶೈಲಿಯಿಂದ ಛಂದೋಬದ್ಧವಾಗಿ ರೂಪುಗೊಂಡಿರುತ್ತದೆ[೧].

ಆಂಗ್ಲ ಕವಿ ಕೋಲ್‌ರಿಜ್ ಅಭಿಪ್ರಾಯಪಟ್ಟಿರುವಂತೆ Words in their best order is prose ಮತ್ತು The best words in their best order is poetry.

ಪದಗಳು ಸುಸಂಬದ್ಧವಾಗಿ ರಚನೆಯಾಗಿರುವುದು ಗದ್ಯವಾದರೆ, ಅತ್ಯುತ್ತಮ ಪದಗಳ ಸುಸಂಬದ್ಧ ರಚನೆಯೇ ಪದ್ಯ. ಗದ್ಯದಲ್ಲಿ ಪದಗಳ ಸುಸಂಬದ್ಧ ರಚನೆ ಮಾತ್ರ ಇದ್ದರೆ ಪದ್ಯದಲ್ಲಿ ಅಪೂರ್ವವಾದ ಅತ್ಯುತ್ತಮ ಪದಗಳು ಇರುತ್ತವೆ. ಹಾಗೂ ರಚನೆ ಸುಸಂಬದ್ಧವಾಗಿ ರಚಿಸಲ್ಪಟ್ಟಿರುತ್ತದೆ.[೨]

ಕಾವ್ಯವು ಭಾಷೆಯ ಶ್ರೇಷ್ಠ ರೂಪ. ಕವಿ ತನ್ನ ಅನುಭವವನ್ನು ಅರ್ಥೈಸಲು ಪ್ರಯತ್ನ ಮಾಡುತ್ತಾನೆ. "ದುಡಿದುಡಿದು ಸತ್ತಾಗ ನುಡಿದು ಬೇಸತ್ತಾಗ ಜನಕೆ ಹಿಗ್ಗಿನ ಹಾಡು" ನೀಡುವವನು ಕವಿ. ಕವಿ ಹೃದಯ ಆರ್ದ್ರವಾದಾಗ ಕಾವ್ಯ ಸೃಷ್ಟಿಯಾಗುತ್ತದೆ. ಕವಿ ತಾನು ತನ್ನ ಅನುಭವಗಳನ್ನು, ತಾನು ಪಟ್ಟ ಪಾಡುಗಳನ್ನು

ಸೂಕ್ತವಾದ ರಸಭಾವಗಳಿಗೆ ಅಳವಡಿಸಿ ಹಾಡಾಗಿಸುತ್ತಾನೆ ಅಥವಾ ಕತೆಯಾಗಿಸುತ್ತಾನೆ.

ಬದುಕಿನಲ್ಲಿ ಸತ್ಯ ಮತ್ತು ಸೌಂದರ್ಯಗಳು ಜೊತೆಗೂಡಿವೆ. ಕವಿ ತಾನು ಕಂಡ ಸತ್ಯಕ್ಕೆ ಚೆಲುವಿನ ರೂಪ ಕೊಡುತ್ತಾನೆ.

ತನ್ನ ಸುತ್ತಲಿನ ಬದುಕನ್ನು ಸೂಕ್ಷ್ಮವಾಗಿ ಅವಲೋಕಿಸಿ ತಾನು ಕಂಡುಕೊಂಡ ಸತ್ಯಗಳನ್ನು ಸಹೃದಯರಿಗೆ ತನ್ನ ಕೃತಿಯ ಮೂಲಕ ಕೊಡುತ್ತಾನೆ. ಕವಿ ಕೃತಿಗಳು ಮೂಲತಃ ಒಂದು ಅನುಭವ ವಿಶೇಷವನ್ನು "ಓದುಗನ ಅನುಭವ ವಿಶೇಷವಾಗಿಸುವುದೇ ಕಾವ್ಯದ ಉದ್ದೇಶ" [೩].

ಸಾಮಾನ್ಯ ಜನರ ಜೀವನವನ್ನು, ಅವರ ಆಸೆ, ನಿರಾಸೆ, ಆಕಾಂಕ್ಷೆ, ಧೈರ್ಯ ಮುಂತಾದುವನ್ನು ವಸ್ತುವಾಗಿಟ್ಟುಕೊಂಡ ಪದ್ಯಕತೆಗಳೂ ನಮ್ಮಲ್ಲಿವೆ. ಇಂತಹ ಹಾಡುಗಳು ಬಿಡಿಬಿಡಿಯಾಗಿಯೆ ಉಳಿದು ಜಾನಪದ ಪದ್ಯಕತೆಗಳಾಗಿ ಉಳಿದುವೆಂದು ಹೇಳಬಹುದು. ಈ ಪದ್ಯಕತೆಗಳಲ್ಲಿ ಕತೆಗಾರಿಕೆಯ ಕಲೆ ಅದ್ಭುತವಾಗಿ ಕಾಣುತ್ತದೆ. ಜೊತೆಗೆ ಸುಲಭವಾಗಿ ನೆನಪಿಡಲು ಸಹಾಯವಾಗುವಂತಹ ಪ್ರಾಸಾನು ಪ್ರಾಸಗಳ ಬಳಕೆಯೂ ಕಾಣುತ್ತದೆ.

ಪದ್ಯಕತೆಗಳೇ ಕಥನಕವನಗಳು. ಇಲ್ಲಿ ಕವಿತೆಗೆ ಭೌತಿಕ ಹಾಗೂ ಮಾನಸಿಕ ಶರೀರಗಳಿವೆ. ಭೌತಿಕ ಶರೀರವೆಂದರೆ ಹಾಳೆಯ ಮೇಲೆ ಮೂಡುವ ಅದರ ರೂಪ ಹಾಗೂ ಅದರ ನಾದಗುಣ. ಮಾನಸಿಕ ಸ್ವರೂಪ ಕಥನ-ಕವನದ ವಸ್ತುವಿಗೆ ಸಂಬಂಧಿಸಿದ್ದು. ಇವೆರಡೂ ಅವಿನಾದ್ವೈತ ಸಂಬಂಧ ಹೊಂದಿರುವುದರಿಂದ ಪರಸ್ಪರ ಬೇರ್ಪಡಿಸಿ ನೋಡುವುದು ಅಸಾಧ್ಯ.

ಇಂಗ್ಲೀಷ್‌ನಲ್ಲಿ ಕಥನ ಕವನಗಳನ್ನು ಬರೆದ ಮುಖ್ಯ ಕವಿಗಳಲ್ಲಿ ಮೊದಲನೆಯವನು ಜೆಫ್ರಿಛಾಸರ್ (Geoffrey Chaucer) ೧೪ನೇ ಶತಮಾನದ ಈ ಕವಿಯ ಕ್ಯಾಂಟರ್ಬರಿ ಕಥೆಗಳು ಬಹಳ ಪ್ರಖ್ಯಾತವಾದವು[೪].

ಬೇರೆ ಬೇರೆ ಬಗೆಯ ಜನರನ್ನು ಕಲೆಹಾಕಿ ಅವರವರ ವ್ಯಕ್ತಿತ್ವಕ್ಕೆ, ಗುಣವಿಶೇಷಕ್ಕೆ ತಕ್ಕಂತಹ ವಸ್ತು, ಶೈಲಿ, ಇವುಗಳಲ್ಲಿ ಕತೆ ಹೇಳಿಸಿದ ಕೀರ್ತಿ ಛಾಸರನದ್ದು. ಕತೆಗಳಲ್ಲಿ ವೈವಿಧ್ಯವಿದೆ. ಬೇರೆಯವರ ಬಾಯಿಂದ ಬರುವುದರಿಂದ ಹೇಳುವ ರೀತಿಯಲ್ಲಿಯೂ ನಿರೂಪಣೆಯ ಶೈಲಿಯಲ್ಲಿಯೂ ವೈವಿಧ್ಯ ಬಂದಿದೆ. ಛಾಸರ್ ಪದಗಳಲ್ಲಿ ಚಿತ್ರಗಳನ್ನು ಎರಕ ಹೊಯ್ದ ಹಿರಿಯ ಕಲಾವಿದ. ತನ್ನ ಕಾಲದಲ್ಲಿ ಪ್ರಚಾರವಾಗಿದ್ದ ಕತೆಗಳನ್ನೇ ತೆಗೆದುಕೊಂಡು ಅವುಗಳನ್ನು ತಾನು ಸೃಜಿಸಿದ ಪಾತ್ರಗಳ ಮೂಲಕ ಹೇಳಿಸಿದ್ದಾನೆ. ಪ್ರತಿಯೊಂದು ಕತೆಯ ವಸ್ತುವೂ ನಿರೂಪಣೆಯ ರೀತಿಯೂ ಶೈಲಿಯೂ ಹೇಳುವವನ ವ್ಯಕ್ತಿತ್ವಕ್ಕೆ ಪಾತ್ರಕ್ಕೆ ಹೊಂದಿಕೊಂಡಿದೆ. ಇದರಿಂದ ಸಹಜತೆಯು ಕಥನಕವನಗಳಲ್ಲಿ ತುಂಬಿದೆ.

ನಾಟಕೀಯತೆಯು ಕತೆಯಲ್ಲಿರಬೇಕಾದ ಮುಖ್ಯಗುಣಗಳಲ್ಲೊಂದು ಎಂಬುದನ್ನು ಮನಗಂಡಿದ್ದ. ಈ ನಾಟಕೀಯತೆಯಿಂದ ಭಾಸರನ ಕಥನಕವನಗಳು ಕಳೆಗಟ್ಟಿದೆ. ಈ ಕತೆಗಳಲ್ಲಿ ಒಂದಕ್ಕೊಂದು ಸಂಬಂಧವಿದ್ದು ಎಲ್ಲವೂ ಸಮಗ್ರ ಚಿತ್ರಣದ ಭಾಗಗಳಾಗಿ ಬಂದಿವೆ.

ಭಾಸರನ ಅನಂತರದಲ್ಲಿಯೂ ಕಥನಕವನ ಇಂಗ್ಲೀಷ್ ನಲ್ಲಿ ಮುಂದುವರೆಯಿತು. ಸ್ಪೆನ್ಸರ್, ಮಿಲ್ಟನ್, ವರ್ಡ್ಸ್‌ವರ್ತ್, ಕೀಟ್ಸ್, ಪ್ರಾನಿಂಗ ಅರ್ನಾಲ್ಡ್, ಮೇಸ್ ಫೀಲ್ಡ್, ಓವನ್ ಮುಂತಾದವರು ಪ್ರಮುಖರು.

ಮನಸೆಳೆಯುವಂತಹ ನಾಟಕೀಯ ಆರಂಭ, ಹಿಂದಿನ ಕತೆಯ ಸಣ್ಣಸೂಚನೆ, ಮನಮುಟ್ಟುವಂತಹ ಸರಳವಾದ ಸಂಭಾಷಣೆ ಹೃದಯಂಗಮವಾದ ಕೊನೆ ಇವು ಕಥನಕವನದ ಲಕ್ಷಣಗಳು. ಅನಾವಶ್ಯಕವಾದ ವರ್ಣನೆಗಳಿಗೆ ಸ್ಥಾನವಿಲ್ಲ. ಸಾಧಾರಣವಾಗಿ ನಾಲ್ಕು ಸಾಲುಗಳುಳ್ಳ ಸುಲಭವಾಗಿ ಕಲಿಯಲು ಸಾಧ್ಯವಾದ ಲಯವನ್ನುಳ್ಳ ಛಂದೋರೂಪ, ಅಲ್ಲಲ್ಲಿ ಕೆಲವು ಸಾಲುಗಳ ಪುನರಾವರ್ತನೆಗಳನ್ನು ಗಮನಿಸಬಹುದು. ಸರಳತೆ ಕಥನಕವನಗಳ ಬಹುಮುಖ್ಯ ಗುಣ[೫].

ಕನ್ನಡದಲ್ಲಿಯೂ ಪದ್ಯರೂಪದಲ್ಲಿ ಕತೆಹೇಳುವುದು ಹಿಂದಿನಿಂದಲೂ ಬಂದಿದೆ. ಗದ್ಯಪದ್ಯ ಮಿಶ್ರಿತವಾದ ಚಂಪೂಗ್ರಂಥಗಳು ನಮ್ಮಲ್ಲಿ ಅಗಾಧವಾಗಿದೆ. ಹರಿಹರನ ಕೆಲವು ರಗಳೆಗಳು ಒಳ್ಳೆಯ ಕಥನಕವನಗಳು.

ಅದೇ ರೀತಿ ಕನ್ನಡದ ಜಾನಪದ ಕಥನಕವನಗಳಲ್ಲಿ ಕತೆಗಾರಿಕೆಯ ಉತ್ತಮ ರೀತಿಯನ್ನು ಕಾಣಬಹುದು. ಸುಮಾರು ೧೮ನೇ ಶತಮಾನಕ್ಕೆ ಸೇರಿದ 'ಗೋವಿನ ಹಾಡು' ಚೌಪದಿಯ ಛಂದಸ್ಸಿನಲ್ಲಿರುವ ಉತ್ತಮ ಕಥನ ಕವನ. ಇಲ್ಲಿ ನೀತಿಬೋಧೆ ಮುಖ್ಯವಾದರೂ ಕತೆಗಾರಿಕೆಯ ನೇರವಾದ ಓಟ ಕುತೂಹಲ ಕೆರಳಿಸಿ, ಮನಸ್ಸನ್ನು ಬೆದಕಿ ಕರುಣೆಯನ್ನು ಕೆದಕುವಂತಹ ನಮ್ಮ ದೇಶಗಳ ಚಿತ್ರಣ ಇವುಗಳಿರುವುದರಿಂದ ನೀತಿಬೋಧೆ ಅತಿಯಾಗಿದೆ ಎಂದು ತೋರುವುದಿಲ್ಲ. ಅನಾವಶ್ಯಕವಾದ ಯಾವ ವರ್ಣನೆಯೂ ಮಾಡದೆ ನೇರವಾಗಿ ಕತೆಯನ್ನು ಪ್ರಸ್ತುತಪಡಿಸುತ್ತದೆ.

ಒಂದು ಇಂಗ್ಲೀಷ್ ಜನಪದ ಕಥನಕವನದ ಆರಂಭವನ್ನು ಒಂದು ಕನ್ನಡ ಜನಪದ ಕಥನಕವನದ ಆರಂಭವನ್ನು ಹೋಲಿಸಿವುದರಿಂದ ಎರಡು ಭಾಷೆಗಳ ಜನಪದ ನೀತಿ ಒಂದೇ ಎಂದು ಸ್ಪಷ್ಟವಾಗುತ್ತದೆ.

ಗದ್ಯಕಥೆಗೂ, ಪದ್ಯಕಥೆಗೂ ಬಹಳ ರೀತಿಯ ಸಾಮ್ಯಗಳಿವೆ. ಕಥನಕವನಗಳ ಕಾವ್ಯಸೌಂದರ್ಯವು ಕೆಲಮಟ್ಟಿಗೆ ಗದ್ಯಕತೆಯಲ್ಲೂ ಇರುತ್ತದೆ ಎಂದು ಕರ್ ಹೇಳಿದ್ದಾನೆ[೬]. (Ker)

ಆದುದರಿಂದ ಗದ್ಯಕತೆಗೂ ಕಥನಕವನಕ್ಕೂ ಬಹುಹೆಚ್ಚಿನ ವ್ಯತ್ಯಾಸವಿಲ್ಲವೆಂದು ಆತನ ಅಭಿಪ್ರಾಯ. ಕತೆ ನಿರಾತಂಕವಾಗಿ, ನೇರವಾಗಿ ಸಾಗುವಂತೆ ಹೇಳುವುದು ಮೊದಲ ಕರ್ತವ್ಯ. ಕತೆಯ ಬೆಳವಣಿಗೆಗೆ ಅಡ್ಡಿಯಾಗುವ ಯಾವುದನ್ನೂ ಅದರಲ್ಲಿ ಸೇರಿಸಲಾಗದು. ವಸ್ತುವನ್ನು ಆರಿಸಿಕೊಂಡ ನಂತರ ಅದರಲ್ಲಿ ಬರುವ ಸನ್ನಿವೇಶಗಳ ಮತ್ತು ಘಟನೆಗಳ ಒಳಹೊಕ್ಕು ಅವುಗಳ ಸತ್ಯವನ್ನು ಚೆನ್ನಾಗಿ ಅರಿತುಕೊಳ್ಳಬೇಕು. ನಂತರ ಮನಸೆಳೆಯುವಂತೆ ಕತೆಯನ್ನು ಹೇಳಬೇಕು. ಘಟನೆಗೆ ಭಾವವೂ ಭಾವಕ್ಕೆ ಘಟನೆಯೂ ಪೋಷಕಗಳಾಗಿ ಎರಡೂ ತುಂಬಿಕೊಂಡು ಬರುತ್ತವೆ. ಉತ್ತಮ ಕತೆಯ ವಸ್ತುವನ್ನು ಉತ್ತಮ ರೀತಿಯಲ್ಲಿ ಹೇಳುವುದು ಕತೆಗಾರಿಕೆಯ ಹಿರಿಮೆ.

ಕಾವ್ಯದ ಲಯಬದ್ಧ ಪದಗಳ ನೆರವಿನಿಂದ ಭಾವವನ್ನೂ ನಾಟಕೀಯ ಸಂಭಾಷಣೆಗಳನ್ನೂ ಇನ್ನೂ ಉತ್ತಮವಾಗಿ ಗದ್ಯಕ್ಕಿಂತಲೂ ಸೊಗಸಾಗಿ, ಹೆಚ್ಚು ಪರಿಣಾಮಕಾರಿಯಾಗಿ ಹೇಳಬಹುದು.

ಆಸಕ್ತಿ ಕಡಿಮೆಯಾಗುವಂತಹ ಸನ್ನಿವೇಶಗಳನ್ನು ತೇಲಿಸಿ, ಸಂಕ್ಷಿಪ್ತಗೊಳಿಸಿ, ಬೇಗಬೇಗ ಮುಂದಿನ ಘಟನೆಗೆ ಹಾರಿಹೋಗುವುದು ಕಥನ ಕವನದ ತಂತ್ರಗಳಲ್ಲಿ ಒಂದು. ಒಮ್ಮೆ ಬಂದ ವರ್ಣನೆ ಪುನರಾವರ್ತನೆಯಾಗದಂತೆ ನೋಡಿಕೊಳ್ಳುವುದು ಅತ್ಯಗತ್ಯ.

ಹೀಗೆ ಕಥನಕವನವು ಪದ್ಯರೂಪದಲ್ಲಿರುವ ಕತೆ 'A narrative in Verse'. ಕಾವ್ಯಗುಣವು ಇಲ್ಲಿ ಕತೆಗೆ ಪೂರಕವಾಗಿ ಬರುತ್ತದೆ ಅಷ್ಟೇ. ಕತೆಯೇ ಪ್ರಧಾನ. ಉಳಿದುದೆಲ್ಲ ಗೌಣ.

ಹೊಸಗನ್ನಡದಲ್ಲಿ ಕಥನಕವನಗಳು ಹೆಚ್ಚು ಸಂಖ್ಯೆಯಲ್ಲಿ ಬಂದಿವೆ. ಇಂಗ್ಲಿಷ್ ಕಥನಕವನಗಳ ಸೊಗಸನ್ನು ಕಂಡ ಕವಿಗಳು ಹೊಸರೀತಿಯಲ್ಲಿ ನೀತಿಬೋಧೆಯನ್ನು ಗೌಣಮಾಡಿ ಕಥನಕವನಗಳನ್ನು ರಚಿಸಿದ್ದಾರೆ. ಹಳೆಯ ಮಟ್ಟುಗಳನ್ನು ಬಳಸಿಕೊಂಡು, ಹೊಸ ಮಟ್ಟುಗಳನ್ನು ಸೃಷ್ಟಿಸಿದ್ದಾರೆ. ಷಟ್ಪದಿ, 'ಗೋವಿನ ಕಥೆ'ಯ ಮಟ್ಟು, ಸಾಂಗತ್ಯ ಇವುಗಳನ್ನು ಉಪಯೋಗಿಸಿ ಕಥನ ಕವನಗಳನ್ನು ಬರೆದಿದ್ದಾರೆ.

ಪಂಜೆ ಮಂಗೇಶರಾಯರು, ಮಾಸ್ತಿಯವರು, ಎಂಎನ್. ಕಾಮತ್, ಎಂ.ಎನ್. ತುಳಸಿಬಾಯಿ, ಶಾಂತಕವಿಗಳು, ಬೇಂದ್ರೆಯವರು, ಸೇಡಿಯಾಪು ಕೃಷ್ಣಭಟ್ಟರು, ಎಂ.ಎನ್. ಅನಂತ ಪದ್ಮನಾಭರಾಯರು, ಕೆ. ನರಸಿಂಹ ಶಾಸ್ತ್ರಿಗಳು, ಎಲ್. ಗುಂಡಪ್ಪ, ಜಿ. ವರದರಾಯ, ಎಸ್.ವಿ. ಪರಮೇಶ್ವರ ಭಟ್ಟ, ಜಿ.ಪಿ. ರಾಜರತ್ನಂ, ಸು.ರಂ. ಎಕ್ಕುಂಡಿ, ಎಂ. ಗೋವಿಂದ ಪೈ, ಪು.ತಿ. ನರಸಿಂಹಾಚಾರ್,

ಆನಂದ ಕಂದ, ಕುವೆಂಪು ಇತ್ಯಾದಿ ಕವಿಗಳೆಲ್ಲರೂ ಕೂಡಾ ಕಥನ ಕವನಗಳಲ್ಲಿ ಕೃತಿ ರಚನೆ ಮಾಡಿದ್ದಾರೆ.

ಕಥೆಯನ್ನು ಕವನದ ರೂಪದಲ್ಲಿ ನೀಡಿದಾಗ, ಕಥೆಗೆ ಗೇಯತೆಯ ಸ್ಪರ್ಶ ಒದಗಿದಾಗ ಉತ್ತಮ ಪರಿಣಾಮ ಬೀರಬಹುದೆಂಬುದನ್ನು ವಿದ್ವಾಂಸರೆಲ್ಲರು ಒಪ್ಪಿದ್ದಾರೆ. ಹೀಗಾಗಿ ಕಥನ ಕವನಗಳು ಇಂದೂ ಸಾಹಿತ್ಯ ಪ್ರಕಾರದಲ್ಲಿ ಚಿರಸ್ಥಾಯಿಯಾಗಿದೆ.

ಹೊಸಗನ್ನಡದಲ್ಲಿ ಭಾವಗೀತೆಯ ಬೆಳೆ ಹುಲುಸಾಗಿದ್ದರೂ ಕಥನ ಕವಿತೆ ಮೊದಲಿನಿಂದಲೂ ಅಲ್ಲಲ್ಲಿ ಬೆಳೆದಿದೆ. ಇವು ಬೇರೆ ಬೇರೆ ಪದ್ಯಧಾಟಿಯಲ್ಲಿ ಮೈದೋರಿದೆ. ರಂ.ಶ್ರೀ ಮುಗಳಿಯವರ ಅಭಿಮತದಂತೆ ಕಥನಕವನಗಳು ಬಹುಶಃ ಮಾಸ್ತಿಯವರ 'ಸ್ಥಳಗಳ ಹೆಸರುಗಳು' ಎಂಬ ಕವನದಿಂದ ಆರಂಭವಾದವು. ಮಾಸ್ತಿಯವರು ಸರಳ ರಗಳೆಯಲ್ಲಿ ಮೊತ್ತಮೊದಲು ಕಥನಕವನಗಳನ್ನು ಬರೆದರಾದರೂ, ಕಥನಕವನಗಳನ್ನು ಬರೆದವರಲ್ಲಿ ಅವರೇ ಮೊದಲಿಗರಲ್ಲ. ೧೯೨೪ರಲ್ಲಿ ಮಾಸ್ತಿಯವರ 'ಅರುಣ' ದಲ್ಲಿ 'ಸ್ಥಳಗಳ ಹೆಸರು' ಬಂದಿತು. ೧೯೦೦ರ ವೇಳೆಗೆ ಪಂಜೆ ಮಂಗೇಶರಾಯರ ಕಥನಕವನಗಳು ಪ್ರಕಟವಾಗಿದ್ದವು.

ಪಂಜೆ ಮಂಗೇಶರಾಯರಿಂದ ಹಲವಾರು ಕಥನಕವನಗಳು ಇಂಗ್ಲೀಷ್‌ನಿಂದ ಕನ್ನಡಕ್ಕೆ ರೂಪಾಂತರಗೊಂಡವು. ವರ್ಡ್ಸ್ ಕವಿಯ 'The Lost of the Flock' ಎಂಬ ಕವಿತೆ ಕನ್ನಡದಲ್ಲಿ 'ಕಡೆಕಂಜಿ'ಯಾಯಿತು. ದುರಂತ ಕತೆ ಉಳ್ಳ 'ಡೊಂಬರ ಚೆನ್ನೆ' ಕೂಡಾ ಸೊಗಸಾದ ವರ್ಣನೆಯಿಂದ ಮೂಡಿದೆ.

ಪಂಜೆಯವರ ಮಿತ್ರರಾದ ಎಂ.ಎನ್. ಕಾಮತ್ ಅವರ ಕಥನಕವನಗಳಲ್ಲಿ ಅನುವಾದಗಳೂ ರೂಪಾಂತರಗಳೂ ಹೆಚ್ಚಿನವು. ಇವು ಚೌಪದಿ ಅಥವಾ ವಾರ ಚೌಪದಿಯಲ್ಲಿವೆ. 'ತೋಳನೂ ಕುರಿಮರಿಯೂ', 'ಆನೆ ಆನೆಯೋ', ಎಸ್.ಜಿ. ಗೋವಿಂದಯ್ಯಂಗಾರರ 'ತಾಮಸ ಪ್ರಭು ಚರಿತಂ', 'ಪ್ರೇಮಪಾಶ' ಸಾಮಾಜಿಕ ಕಥನಕವನ, 'ಗಿಳಿ ಕಾಗೆ' ಎಂಬುದು ಹಾಸ್ಯ ಕಥನಕವನ. ಅದೇ ರೀತಿ ಕ್ರ್ಯಾಬ್ (Crabbe) ಬರೆದ John Gilpin ಕಥನಕವನವನ್ನು ಎಂ.ಎನ್. ತುಳಸೀಬಾಯಿ ಎಂಬವರು ಗೋವಿನ ಕಥೆಯ ಮಟ್ಟಿನಲ್ಲಿ 'ರಂಗಸೆಟ್ಟಿ' ಎಂದು ಅನುವಾದಿಸಿದ್ದಾರೆ. ಇದರೊಡನೆ 'ಕಾಳಗೌಡ'ರು ಸ್ವತಂತ್ರ ಕಥನಕವನವನ್ನು ರಚಿಸಿದ್ದಾರೆ. ಎಂ.ಎನ್. ಶ್ರೀನಿವಾಸರಾವ್ ಬ್ರೌನಿಂಗ್ ಕವಿಯ 'The Pieol Piper of Hamelin' ಎಂಬುದನ್ನು ಕೊಳಲುಜೋಗಿ ಎಂದು ರೂಪಾಂತರಿಸಿದರೆ, ಶಾಂತಕವಿಗಳು ಪುರಾಣದ ಕತೆಗಳನ್ನು ಕೀರ್ತನರೂಪದಲ್ಲಿ ಬರೆದರು.

ರಾಷ್ಟ್ರೀಯತೆಯ ಪ್ರಜ್ಞೆಯನ್ನು ಜಾಗೃತಗೊಳಿಸುವ ಬೇಂದ್ರೆಯವರ ಕೃಷ್ಣಕುಮಾರಿ ವಾರ್ಧಕಷಟ್ಪದಿಯಲ್ಲಿ ಮೂಡಿದರೆ ಸೇಡಿಯಾಪು ಕೃಷ್ಣಭಟ್ಟರ 'ಕೃಷ್ಣಕುಮಾರಿ' ಭಾಮಿನಿ ಷಟ್ಪದಿಯಲ್ಲಿದೆ. 'ತರುಣಧಮನಿ' ಅಶ್ವಮೇಧ ಇವು ಸೇಡಿಯಾಪು ಕೃಷ್ಣಭಟ್ಟರ ಇನ್ನಿತರ ಗಮನಾರ್ಹ ಕಥನಕವನಗಳು.

'ರಾಘವ'ರು ಬರೆದ ಗಂಡನ ಪೂಜೆ, ದಾದಿರನ್ನೆ ಉತ್ತಮ ಕಥನಕವನಗಳು. ಮಾಸ್ತಿ ವೆಂಕಟೇಶ ಐಯ್ಯಂಗಾರರು ಕಥನಕವನದ ಸೃಷ್ಟಿಯಲ್ಲೂ ಪ್ರಮುಖರು. ಕನ್ನಡದಲ್ಲಿ ಅತಿ ಹೆಚ್ಚಿನ ಸಂಖ್ಯೆಯ ಕಥನಕವನಗಳನ್ನು ರಚಿಸಿದ ಕೀರ್ತಿ ಮಾಸ್ತಿಯವರಿಗೆ. ಅವರ ನವರಾತ್ರಿ, ಮೂಕನ ಮಕ್ಕಳು, ರಾಮನವಮಿ ಮತ್ತು ಗೌಡರ ಮಲ್ಲ ಉತ್ತಮ ಕಥನಕವನಗಳಾಗಿವೆ.

'ಶ್ರೀ ರಾಮಕೃಷ್ಣ ಪರಮಹಂಸರು' ಮತ್ತು ಕರ್ಣ ಎಂಬೆರಡು ದೀರ್ಘ ಕಥನಕವನಗಳನ್ನು ಬರೆದವರು ಎಂ.ಎಸ್. ಅನಂತ ಪದ್ಮನಾಭರಾಯರು. ಪಂಡಿತ ಕೆ. ನರಸಿಂಹ ಶಾಸ್ತ್ರಿಗಳ 'ಸೀತಾ ವನವಾಸ' ಅಲ್ಲದೆ ಅರ್ನಾಲ್ಡನ ಇಂಗ್ಲೀಷ್ ಕವಿತೆಯ ಆಧಾರದ ಮೇಲೆ ಬರೆದ 'ಸೊಹ್ರಾಬ್ ಮತ್ತು ರುಸ್ತುಮ್', ಜಿ. ವರದರಾಜರಾಯರ 'ಓಬವ್ವ', ಕೆ. ನರಸಿಂಹಮೂರ್ತಿಯವರ 'ಅಶೋಕ ವಿಜಯ', ಎಸ್.ವಿ. ಪರಮೇಶ್ವರ ಭಟ್ಟರ 'ಜಹನಾರ' ಇವೆಲ್ಲವು ಐತಿಹಾಸಿಕ ಕಥನಕವನಗಳು.

ಜಿ.ಪಿ. ರಾಜರತ್ನಂ ಅವರ 'ತಾರೆ' ಸು.ರಂ. ಎಕ್ಕುಂಡಿಯವರ ಪುರಾಣಕತೆಗಳಿಗೆ ಸಂಬಂಧಿಸಿದ 'ಊರ್ವಶಿ', 'ಅವಧೂತ', 'ಸುಭದ್ರ', 'ಮಾರಿಷಾ', ಕನಕದಾಸರಿಗೆ ಸಂಬಂಧಿಸಿದ 'ದೇವರು ನೀರೆರೆದನು' ಉತ್ತಮ ಕಥನಕವನಗಳು

ಎಂ. ಗೋವಿಂದ ಪೈಯವರ ಬೌದ್ಧಸಾಹಿತ್ಯದಿಂದ ಆರಿಸಿದ ವಸ್ತುವಿನಿಂದ ಮೂಡಿದ 'ಹುಲ್ಲು ಕಟಿಗ', 'ಭಿಕ್ಷುವೂ ಪಕ್ಷಿಯೂ', 'ಮಾತಂಗಿ' ಅಲ್ಲದೆ ದೇಶಭಕ್ತಿಯನ್ನು ಪ್ರತಿಪಾದಿಸುವ ಹಳ್ಳಿಯ ಹುಡುಗಿ ಉತ್ತಮ ಕಥನಕವನಗಳು.

ಪು.ತಿ. ನರಸಿಂಹಾಚಾರ್ಯರ 'ನವರಂಗಿ' ಡ್ಯಾನ್ ಅಂಡರ್ಸನ್ನನ ಕಥೆಯೊಂದರ ಭಾವಾನುವಾದ. ತೆಕ್ಕುಂಜ ಗೋಪಾಲಕೃಷ್ಣ ಭಟ್ಟರ 'ವೀರವಿಲಸಿತ' ಕಥನಕವನ ಪಿರಿಯಕ್ಕರದಲ್ಲಿದೆ. ಆನಂದಕಂದರ 'ಶಬರಿಯ ಬಾಳು' ಸರಳ ರಗಳೆಯಲ್ಲಿರುವ ಭಾವಪ್ರಧಾನವಾದ ಕವನ. ಕುವೆಂಪುರವರು ಸ್ವತಂತ್ರ ಕಥನಕವನಗಳನ್ನು ಬರೆದಿದ್ದಾರೆ. ಡೊಲಿ, 'ಮಂಜಣ್ಣ ಹೇಳಿದ ಸ್ಥಲಗತೆ, ಕರಿಸಿದ್ಧ, ತಾನಾಜಿ, ರಕ್ತ ರಜನಿ, ಮರಸು ಬೇಟೆ. ಅಲ್ಲದೆ 'The Piceol Piper of Homelin' ಎಂಬುದರಿಂದ ಪ್ರೇರಿತವಾದ 'ಬೊಮ್ಮರಿ ಹಳ್ಳಿಯ ಕಿಂದರಿ ಜೋಗಿ', 'ಕುಮುದಿನಿ', ಇತ್ಯಾದಿ ಪ್ರಸಿದ್ಧವಾದ ಕಥನಕವನಗಳನ್ನು ಬರೆದಿದ್ದಾರೆ.

ಈ ರೀತಿಯಾಗಿ ಸಾಹಿತ್ಯ ಪ್ರಕಾರದಲ್ಲಿ ಕಥನಕವನವೆಂದರೆ ಕಥೆಯುಳ್ಳ ಕವನ ಎಂಬ ಅರ್ಥವಿಸ್ತಾರವನ್ನು ಪಡೆದಿದೆ. ಕವಿತೆಯಲ್ಲಿ ಕಥೆಗಿಂತ ಕಥನ ಮೇಲುಗೈ ಪಡೆಯುತ್ತದೆ. ಹೀಗಾಗಿ ಕೆಲವು ಕವಿತೆಗಳಲ್ಲಿ ಕಥೆ ಎಂಬುದು ಇಲ್ಲದಿದ್ದರೂ ಬಲವಾದ ಕಥನ ಮಾತ್ರ ಎಲ್ಲಾ ಕವಿತೆಗಳಲ್ಲೂ ಇದ್ದೇ ಇದೆ. [೭]

**ಟಿಪ್ಪಣಿಗಳು :-**

೧. ಅನಸೂಯಾ ವಿ. ಪರಗಿ – ಪುಟ – ೨೯೮, ಮಾತೃಭಾಷೆ ಕನ್ನಡ ತತ್ವ ಮತ್ತು ಬೋಧನಾ ಮಾರ್ಗ ವಿವೇಕ ಪ್ರಕಾಶನ, ಚಿಕ್ಕಬಳ್ಳಾಪುರ ೨೦೦೫

೨. ಅದೇ ಪುಟ ೨೯೯

೩. ಡಾ. ಮಹಾಬಲೇಶ್ವರ ರಾವ್, ಪುಟ ೪೯, ಪ್ರೌಢ ಶಾಲೆಗಳಲ್ಲಿ ಕನ್ನಡ ಬೋಧನೆ ನವಕರ್ನಾಟಕ ಪ್ರಕಾಶನ
ಅನಂತ ನಾರಾಯಣ ಎಸ್., ಪುಟ ೨೭೭,

೪. ಹೊಸಗನ್ನಡ ಕವಿತೆಯ ಮೇಲೆ ಇಂಗ್ಲೀಷ್ ಕಾವ್ಯದ ಪ್ರಭಾವ ಪ್ರಕಾಶಕರು ಡಿ.ವಿ.ಕೆ ಮೂರ್ತಿ, ಮೈಸೂರು ಮರುಮುದ್ರಣ ೧೯೬೨ (ನಾಲ್ಕನೆ ಮುದ್ರಣ – ೨೦೦೦)

೫. ಅನಂತ ನಾರಾಯಣ ಎಸ್. ಪುಟ ೨೭೭ ಹೊಸಗನ್ನಡ ಕವಿತೆಯ ಮೇಲೆ ಇಂಗ್ಲೀಷ್ ಕಾವ್ಯದ ಪ್ರಭಾವ ಪ್ರಕಾಶಕರು ಡಿ.ವಿ.ಕೆ ಮೂರ್ತಿ, ಮೈಸೂರು ಮರುಮುದ್ರಣ ೧೯೬೨ (ನಾಲ್ಕನೆ ಮುದ್ರಣ – ೨೦೦೦)

೬. ಉಧೃತ – ಅನಂತ ನಾರಾಯಣ ಎಸ್. ಪುಟ ಸಂಖ್ಯೆ ೨೮೫, ಹೊಸಗನ್ನಡ ಕವಿತೆಯ ಮೇಲೆ ಇಂಗ್ಲೀಷ್ ಕಾವ್ಯದ ಪ್ರಭಾವ ಪ್ರಕಾಶಕರು ಡಿ.ವಿ.ಕೆ ಮೂರ್ತಿ, ಮೈಸೂರು ಮರುಮುದ್ರಣ ೧೯೬೨ (ನಾಲ್ಕನೆ ಮುದ್ರಣ – ೨೦೦೦)

೭. ನರಹಳ್ಳಿ ಬಾಲಸುಬ್ರಹ್ಮಣ್ಯ, ಪುಟ ೧೧೦ ಸಾಹಿತ್ಯ ಸಂಸ್ಕೃತಿ ಅಂಕಿತ ಪುಸ್ತಕ, ಬಸವನಗುಡಿ, ಬೆಂಗಳೂರು ೧೯೯೮

# ಅಧ್ಯಾಯ – ೩

## ಕಡೆಂಗೋಡ್ಲು ಕಥನ ಕವನಗಳಲ್ಲಿ ಸ್ತ್ರೀ ಸಂವೇದನೆ

ತ್ಯಾಗಕ್ಕೆ, ತಾಳ್ಮೆಗೆ, ಸೇವೆಗೆ ಇನ್ನೊಂದು ಹೆಸರೇ ಹೆಣ್ಣು ಎಂಬುದು ಸಾಂಪ್ರದಾಯಿಕ ನಂಬಿಕೆ. ವೇದಗಳ ಕಾಲದಲ್ಲಿ ಹೆಣ್ಣಿಗೆ ಸ್ವಾತಂತ್ರವಿತ್ತು ಎನ್ನಲಾಗುತ್ತದೆ. ಅದೇನಿದ್ದರೂ ತೀರಾ ಪ್ರಾಚೀನ ಕಾಲದಿಂದಲೇ, ಪುರುಷನ ಮನೋಭಾವಕ್ಕೆ ಹೊಂದಿಕೆಯಾಗುವಂತೆ, ಹೆಣ್ಣಿನ ವ್ಯಕ್ತಿತ್ವವನ್ನು ನಿರೂಪಿಸುವ ಬಗೆಯನ್ನು ಪುರಾಣಗಳಲ್ಲೂ ಕಾಣುತ್ತೇವೆ. ದಿಟ್ಟ ಸ್ತ್ರೀ ಪಾತ್ರಗಳು ಪುರಾಣಗಳಲ್ಲಿ ಇಲ್ಲ ಎಂದು ಇದರ ಅರ್ಥವಲ್ಲ. ತ್ಯಾಗ, ತಾಳ್ಮೆ ಎಂಬೆಲ್ಲಾ ಮೌಲ್ಯಗಳ ಹೆಸರಿನಲ್ಲಿ ಸತಿ ಪದ್ಧತಿಯಂಥ ಆಚರಣೆಗಳನ್ನು ನಡೆಸಿಕೊಂಡು ಬರಲಾಯಿತು.

ಆಧುನಿಕ ಕಾಲದಲ್ಲಿ ಮೌಲ್ಯಗಳು ಪಲ್ಲಟವಾಗಿ, ಇಂಥ ಅನಿಷ್ಟ ಆಚರಣೆಗಳು ತೊಲಗಿರುವುದೂ ನಿಜ. ಹಾಗಿದ್ದರೂ ಸಾಹಿತ್ಯದಲ್ಲಿ ಹೆಣ್ಣಿನ ಪಾತ್ರವನ್ನು, ನಡವಳಿಕೆಯನ್ನು ಚಿತ್ರಿಸುವಾಗ ತೀರಾ ಈಚಿನ ವರ್ಷಗಳಲ್ಲೂ ಪುರುಷನಿಷ್ಠ ದೃಷ್ಟಿಕೋನವೇ ಅಪ್ರಜ್ಞಾಪೂರ್ವಕವಾಗಿ ಕೆಲಸ ಮಾಡಿರುವುದನ್ನು ಕಾಣಬಹುದು. ಈ ಹಿನ್ನೆಲೆಯಲ್ಲಿ ಹೆಣ್ಣನ್ನೇ ಪ್ರಧಾನ ಪಾತ್ರವಾಗಿ ಹೊಂದಿದ ಸಾಹಿತ್ಯ ಕೃತಿಗಳನ್ನು ಅಧ್ಯಯನ ಮಾಡುವಾಗ ಸ್ತ್ರೀಸಂವೇದನೆಯೂ ಅಂಥ ಕೃತಿಗಳಲ್ಲಿ ಹೇಗೆ ವ್ಯಕ್ತವಾಗಿದೆ ಎಂಬುದನ್ನು ಪರಿಶೀಲಿಸುವ ಅಗತ್ಯವಿದೆ.

ಹೆಣ್ಣು ತನ್ನ ದಿಟ್ಟತನದಿಂದ ಸಮಾಜದಲ್ಲಿ ಉನ್ನತಮಟ್ಟದ ಸ್ಥಾನವನ್ನು ಪಡೆಯಬೇಕು. ಅಂದಾಗ ಮಾತ್ರ ಅವಳು ಹೊಸ ಮಹಿಳೆಯಾಗಲು ಸಾಧ್ಯ. ಹೆಣ್ಣು ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಗಂಡಿಗೆ ಸಮಾನಳಾಗಿ ಬದುಕಬೇಕು. ಇದು ಇಂದಿನ ಸಮಾಜದ ಆಶಯ.

ಪುರುಷ ಕೇಂದ್ರೀಕೃತ ಸಮಾಜದಲ್ಲಿ ಸ್ತ್ರೀಸಮುದಾಯ ಉಸಿರು ಬಿಗಿಹಿಡಿದದ್ದು ನಿಜವಾದ ಮಾತು. ಪುರುಷನಿಗೆ ಸಮಾನವಾದ ಸ್ಥಾನಮಾನಕ್ಕೆ ತಾನು ಅರ್ಹಳು ಎಂಬುದನ್ನು ಸ್ತ್ರೀ ವೇದೋಪನಿಷತ್ತುಗಳ ಕಾಲದಿಂದಲೂ ಸಾಬೀತು ಮಾಡುತ್ತಾ ಬಂದಿದ್ದಾಳೆ. ಪ್ರತಿಭೆಯ ಪ್ರಕಟಣೆಯಾಗಲಿ, ಶೋಷಣೆಗೆ ಪ್ರತಿಭಟನೆಯಾಗಲಿ ನಿರಂತರವಾಗಿ ನಡೆಯುತ್ತ ಬಂದರೂ ಅದರ ಪ್ರಮಾಣ ಕಡಿಮೆಯೆ. ಈ ಎಚ್ಚರ ಕ್ರಿಯಾಶೀಲತೆ ಗಣನೀಯ ಪ್ರಮಾಣದಲ್ಲಿ ಸಾಹಿತ್ಯ ಕ್ಷೇತ್ರದಲ್ಲಿ ಕಾಣಿಸಿಕೊಂಡದ್ದು ಕಳೆದ ಶತಮಾನದಿಂದ.

ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಸ್ತ್ರೀಸಂವೇದನೆಯ ಧ್ವನಿ ಪ್ರಖರವಾಗಿ ಕಾಣಿಸಿಕೊಳ್ಳತೊಡಗಿದ್ದು ಇಪ್ಪತ್ತನೆ ಶತಮಾನದಲ್ಲಿ. ಆಧುನಿಕ ಕನ್ನಡ ಸಾಹಿತ್ಯ

ಸಂದರ್ಭದಲ್ಲಿ ಪ್ರಚಲಿತವಿರುವ ಬಹುತೇಕ ಎಲ್ಲಾ ಸೃಜನಶೀಲ ಪ್ರಕಾರಗಳಲ್ಲಿ ಸ್ತ್ರೀಸಂವೇದನೆಯ ಹರವಿದೆ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಸ್ತ್ರೀತ್ವದ ಆಧ್ಯಾತ್ಮಿಕ ಶಕ್ತಿಯನ್ನು ಸೆರೆಹಿಡಿದ ಹಾಗೆಯೇ ಲೌಕಿಕ ಸ್ವರೂಪಿಣಿಯಾದ ಸ್ತ್ರೀತ್ವದ ಕಲ್ಪನೆಯನ್ನು ಗುರುತಿಸಲಾಗಿದೆ. ಆಧುನಿಕ ಕನ್ನಡ ಸಾಹಿತ್ಯ ಸೆರೆ ಹಿಡಿದ ಭೌತಿಕ ಸ್ವರೂಪವನ್ನು ಆದರ್ಶರೂಪವಾಗಿ ಮತ್ತು ವಾಸ್ತವರೂಪವಾಗಿ ಗ್ರಹಿಸಲಾಗಿದೆ. ಭೌತಿಕ ಸ್ವರೂಪದಲ್ಲಿ ಸ್ತ್ರೀತ್ವವನ್ನು ಗುರುತಿಸುವಾಗ ಪುರುಷ ಲೇಖಕರು ಪತ್ನಿ, ತಾಯಿ, ಪಾವಿತ್ರ್ಯ ಮೊದಲಾದ ಅಂತಸ್ಥ ಅರ್ಥಗಳಿಂದ ಗ್ರಹಿಸುತ್ತಾರೆ. ಹೆಣ್ಣು ಭೂಮಿಯಾಗಿ, ತಾಯಿಯಾಗಿ ಚಂದ್ರನಾಗಿ ನಿಸರ್ಗವಾಗಿ ಸಹಜತೆಯ ಪ್ರತೀಕವಾಗಿ ಆರಾಧನೆಗೆ ಒಳಗಾಗಿರುವುದು ಈ ದೃಷ್ಟಿಯಿಂದ ಸಹಜ ಅನುಕ್ರಮ.

ಕಡೆಂಗೋಡ್ಲು ಶಂಕರ ಭಟ್ಟರ ಕವನಗಳಲ್ಲಿ ಪ್ರಮುಖ ಅಂಶವೇ ಹೆಣ್ಣು. ಇಲ್ಲಿ ನಡೆಯುವ ಕಥನಗಳೆಲ್ಲವೂ ಕೂಡಾ ಹೆಣ್ಣಿನ ಸಂವೇದನೆ ಉಳ್ಳವು. ಪ್ರಮುಖವಾಗಿ ಹೆಣ್ಣು, ಹೊನ್ನಿಯ ಮದುವೆ, ಮಾದಿಯ ಚಿತೆ, ಮುರಲಿನಾದ, ಭೂತಾಳ ಪಾಂಡ್ಯ ಈ ಕಥನಗಳಲ್ಲಿ ಮೂಡಿದ ಸ್ತ್ರೀಸಂವೇದನೆಯನ್ನು ಗಮನಿಸಿದಾಗ ಕವಿ ಸ್ತ್ರೀಯ ಒಳಮನಸ್ಸನ್ನು ಅರ್ಥಪೂರ್ಣವಾಗಿ ಅವಲೋಕಿಸಿದ್ದಾರೆ ಎನ್ನಬಹುದು.

ಕಡೆಂಗೋಡ್ಲು ಶಂಕರ ಭಟ್ಟರ ಪ್ರಮುಖ ಕವನಗಳಲ್ಲಿ ಸ್ತ್ರೀಪ್ರಧಾನ ಭೂಮಿಕೆಯಲ್ಲಿದ್ದಾಳೆ. ಹೊನ್ನಿಯ ಮದುವೆ, ಹೆಣ್ಣು, ಮಾದ್ರಿಯ ಚಿತೆ, ಭೂತಾಳ ಪಾಂಡ್ಯ, ಮುರಲೀನಾದ ಈ ಕಥನಕವನಗಳಲ್ಲಿ ಕವಿ ಸ್ತ್ರೀತ್ವಕ್ಕೆ ಮತ್ತು ಆಕೆಯ ಅಂತರಂಗದ ತುಮುಲಗಳಿಗೆ ಹೆಚ್ಚಿನ ಗಮನ ಹರಿಸಿದ್ದಾರೆ. ಹೆಣ್ಣು ಕೆಲವು ಕಡೆ ಸಾಮಾಜಿಕ ಕಟ್ಟುಪಾಡುಗಳನ್ನು ಮೀರಿ ನಿಲ್ಲುತ್ತಾಳೆ. 'ಹೆಣ್ಣು' ಕವನದಲ್ಲಿ ತನ್ನ ಗಂಡ ಸಾವನ್ನಪ್ಪಿದಾಗ ಮತ್ತೊಂದು ಗಂಡಿನ ಆಕ್ರಮಣವನ್ನು ಎದುರಿಸಲಾರದೆ ದುರಂತವನ್ನಪ್ಪುತ್ತಾಳೆ. ಸಾವು ಜೀವನದ ಕೊನೆಯಾಗದೆ ಹೊಸ ಸೃಷ್ಟಿಗಳ ಸಂಬಂಧವಾಗುವ ಧೋರಣೆ ಕವಿಗಿಲ್ಲ.[೧]

'ಹೊನ್ನಿಯ ಮದುವೆ'ಯಲ್ಲಿ ಕಥಾನಾಯಕಿ ಹೊನ್ನಿ, ಚೆನ್ನ ಕಥಾನಾಯಕ. ಆದರೂ ಅಲ್ಲಿ ಹೆಚ್ಚಿನ ಪ್ರಾಮುಖ್ಯತೆ ಹೊನ್ನಿಯ ಮನಸ್ಸಿಗೆ. ಅವಳ ಭಾವನೆಗಳಿಗೆ. ಕವಿ ಹೊನ್ನಿಯನ್ನು 'ಹೊನ್ನಿ'ಗೆ ಸಮೀಕರಿಸಿದ್ದಾರೆ. ಸಮಾಜದ ದೃಷ್ಟಿಯಲ್ಲಿ ತನ್ನ ತಂದೆಗೆ ಸರಿಯಾಗಿ ನಡೆದುಕೊಂಡು ತನ್ನ ಸುಖವನ್ನು ತ್ಯಾಗ ಮಾಡುತ್ತಾಳೆ. ಸಂದರ್ಭೋಚಿತವಾಗಿ 'ಚೆನ್ನ'ನ ಪ್ರಸ್ತಾಪ ಬಂದರೂ ಉಳಿದಂತೆ ಹೊನ್ನಿಯೇ ಖಂಡ ಕಾವ್ಯದ ಆಕರ್ಷಣೆ.

"ಹೊನ್ನಿಯೇ ನೀನೇ !

ಎನ್ನೆದೆ ತಂಪಿನ
ಮೋಹದ ನೆರಳಾಗಿದೆ ಮಗಳೇ ।
ಅಚ್ಚರಿದೆಮ್ಮಯ
ನಲ್ಮೆಯ ಹೆಮ್ಮೆಯ
ಜೀವನ ಸಾರದ ಬಿರಿ ಮುಗುಳೇ !

ತನ್ನ ತಂದೆ ತನ್ನಲ್ಲಿರಿಸಿದ ವಿಶ್ವಾಸವನ್ನು ಉಳಿಸಿಕೊಡುವುದು ಹೊನ್ನಿಗೆ ಮುಖ್ಯವಾಗುತ್ತದೆ. ಹಿರಿಯರು ಏನು ಮಾಡಿದರು ಕಿರಿಯರ ಒಳಿತಿಗಾಗಿ ಎಂಬ ಭಾವವನ್ನು ಹೊನ್ನಿ ತಾಳುತ್ತಾಳೆ.

ನಡುಮನೆ ಗೌಡನ
ಮುದ್ದಿನ ಕುವರನ
ಜತೆಯಲಿ ನಿನ್ನನು ಹಂದರೊಳು
ನೀರೆರೆದಿತ್ತದೆ
ಪುಣ್ಯವ ಸವಿಯುವ
ಕಣ್ಣೆನಗಿಲ್ಲದುದಿದೆ ಅಳಲು.

ಇದು ಹೊನ್ನಿಯ ತಂದೆಯ ಮನದಿಂಗಿತ. ತನ್ನ ಮಗಳನ್ನು ಊರಿನ ಶ್ರೀಮಂತ ಗೌಡನ ಮಗನಿಗೆ ಧಾರೆ ಎರೆದಿತ್ತರೆ ತನ್ನ ಪಾಲಿಗೆ ಅದೇ ಪರಮ ಸೌಭಾಗ್ಯ ಎಂಬ ಮನದಿಂಗಿತ ಆತನದು. ಹಲವು ಪರಿಯಲಿ ಪ್ರೇಮದ ಸರಿಯಲಿ ಮೀಯಿಸುವನು ತನ್ನೆಳೆಮಗಳ.

ಇಲ್ಲಿ ಇದಿರಾಡುವ ಪದ್ಧತಿಯಲ್ಲದವಳು ಹೊನ್ನಿ. ಆದರೆ ತನ್ನ ಮನಗೆದ್ದ ಚೆನ್ನನನ್ನು ಪ್ರೀತಿಸುವವಳು ಹೊನ್ನಿ. ಹೊನ್ನಿ ಶ್ರೀಮಂತಿಕೆಯಲ್ಲಿ ಬೆಳೆದವಳಾದರೆ ಚೆನ್ನನ ಸ್ಥಿತಿ

ಎರಡು ದಿನದಿ ದುಡಿ
ದರೆ ಒಂದೂಟಕೆ
ಬರುವುದು ನಮ್ಮಯ ಸಂಪತ್ತು
ಗ್ರಾಮದ ಹಿರಿಯನ
ಚೊಚ್ಚಲು ಕುವರಿಗೆ
ಸಾಲುವುದೇ ಬಡವನ ತುತ್ತು !

ಪ್ರೇಮವೊಂದು ನವಿರಾದ ಭಾವ. ಇದು ಮೂಡಿದ್ದು ಹೊನ್ನಿಯ ಹೊನ್ನೆದೆಯಲ್ಲಿ. ಚೆನ್ನ ಹಿತಮಿತ ಮಧುರ ವರ್ತನೆಯುಳ್ಳ ನಮ್ರತರುಣ. ಅದೇ ರೀತಿ ತಾನು ಪ್ರೀತಿಸಿದ ಹೊನ್ನಿಗಾಗಿ ಜೀವನವನ್ನೇ ಕೊಡಲು ಸಿದ್ಧವಾದ ತ್ಯಾಗಿ. ಆದರೆ

ಕಂಡವರನು ಕೈ
ಹಿಡಿದರೆ ತಂದೆಗೆ

ಕೆಂಡ ಮುನಿಸು ಬಾರದೆ ಇಹುದೇ ?

ಇದು ಹೊನ್ನಿಯ ಸಂಪ್ರದಾಯದ ಮನೋಧರ್ಮ. ಈ ಬೇಲಿಯನ್ನು ದಾಟಲಾರದವಳು ಹೊನ್ನಿ. ಹೊನ್ನಿಯ ಈ ಮನೋಧರ್ಮಕ್ಕೆ ಸಾಕ್ಷಿ ಕವಿಯ ಮತ್ತೊಂದು ಸಾಲು ಗಮನಾರ್ಹವಾಗುತ್ತದೆ.

ಹೆತ್ತವನೆಂದರೆ
ಹೊತ್ತವನಲ್ಲವೆ ?
ಹಲವು ಬರಿಸ ಹೊರೆದವನಲ್ಲಾ ?
ತನುವೋ ಜೀವವೋ
ಮೆಯ್ಸಿರಿ ಯೆಲ್ಲವು
ಆತನು ಕೊಟ್ಟ ಋಣವಲ್ಲ ?

ಎಂದು ಯೋಚಿಸಿದ ಹೊನ್ನಿ ತನ್ನ ಪ್ರೀತಿಯನ್ನು ತ್ಯಾಗ ಮಾಡುತ್ತಾಳೆ. "ತಾನು ಊರ ಗೌಡನ ಮಗನನ್ನು ಮದುವೆಯಾಗಲಾರೆ. ಏಕೆಂದರೆ ಚೆನ್ನನನ್ನು ತಾನು ಪ್ರೀತಿಸುತ್ತಿದ್ದೇನೆ" ಎಂದು ತನ್ನ ಮನದಿಂಗಿತವನ್ನು ತಂದೆಗೆ ಹೇಳಲಾರದವಳು ಅವಳು. ಏಕೆಂದರೆ ತನ್ನಂಥ ಸಿರಿವಂತರ ಮಗಳು ಬಡ ಚೆನ್ನನನ್ನು ಮದುವೆಯಾಗಲು ತಂದೆ ಒಪ್ಪಲಾರ ಎನ್ನುವುದನ್ನು ಸೂಕ್ಷ್ಮವಾಗಿ ಗ್ರಹಿಸಿದ ದುರಂತ ನಾಯಿಕೆ ಹೊನ್ನಿ.

ತಂದೆಯ ಮನಸ್ಸನ್ನು ನೋಯಿಸುವುದು ಅನ್ಯಾಯವೆಂದು ಮನಗಂಡು ಆತ್ಮಹತ್ಯೆಗೆ ಶರಣಾಗುತ್ತಾಳೆ. ಅವಳ ಪ್ರತಿರೋಧವು ಆತ್ಮಹತ್ಯೆಯ ಮೂಲಕ ವ್ಯಕ್ತವಾಗುತ್ತದೆ. ಅಂದರೆ, ತಂದೆಯನ್ನು ಮತ್ತು ಸಮಾಜವನ್ನು ಎದುರಿಸಲಾಗದ ಪಲಾಯನದಂತೆ ಇದು ಕಂಡರೂ, ಆತ್ಮಹತ್ಯೆಯೂ ಪ್ರತಿಭಟನೆಯ ಒಂದು ದಾರಿಯಾಗಿ ಇಲ್ಲಿ ಕಾಣುತ್ತದೆ. ಪ್ರೀತಿಗಾಗಿ ಪ್ರಾಣವನ್ನೇ ತ್ಯಾಗ ಮಾಡಬೇಕಾದ ಅನಿವಾರ್ಯತೆಗೆ ಒಳಗಾಗುವವಳು ಹೆಣ್ಣು ಎಂಬುದು ಮುಖ್ಯವಾಗುತ್ತದೆ.

ಕವಿಗೆ ಹೆಣ್ಣನ್ನು-ಆಕೆಯ ಆಸೆ ಆಕಾಂಕ್ಷೆಗಳನ್ನು ಉಳಿಸುವ ಒಲವಿತ್ತು. ಆದರೆ ಅಂದಿನ ಸಮಾಜದ ಕಟ್ಟುಪಾಡುಗಳು ಹೊನ್ನಿಯನ್ನು ಬಲಿತೆಗೆದುಕೊಂಡಿತು. ಸ್ವತಹ ಹೊನ್ನಿ ತನ್ನ ತಂದೆಗೆ ಇದಿರಾಡದೆ, ಆತನ ಮೇಲಿನ ಗೌರವದಿಂದ ತನ್ನ ಪ್ರೀತಿಯನ್ನು ತ್ಯಾಗ ಮಾಡುತ್ತಾಳೆ.

ಆದರೆ ಅವಳ ತಂದೆ ತಾನೆಲ್ಲೋ ತಪ್ಪಿದ್ದೇನೆ ಎಂಬ ಅರಿವಾದಾಗ

ಮಗಳೇ ತಂದೆಯ
ನುಡಿಯನೆ ದೆವ್ವದ
ನುಡಿಯೆಂದೇ ನೀ ಭಾವಿಸಿದೆ
ಇದಿರಿದಿರಾಡುವ ಪದ್ಧತಿಯಿಲ್ಲದೆ
ಇಂದೆನ್ನನು ನೀ ವಂಚಿಸಿದೆ. ಎಂದು ಹೊನ್ನಿಯ ಪ್ರವೃತ್ತಿಯನ್ನು ಪ್ರಶ್ನಿಸುತ್ತಾನೆ. ಅಷ್ಟೂ ಅಲ್ಲದೆ

ಆರಾಗಲಿ । ನಿ
ನ್ನಯ ಬಗೆಮೆಚ್ಚಲು
ಧಾರೆಯೆರೆವೆ–ಮೊಗದೋರಿಗ ಎಂದು ಹಾತೊರೆಯುತ್ತಾರೆ.

ಹೊನ್ನಿ ತನ್ನ ಮನದಿಂಗಿತವನ್ನು ತಂದೆಯ ಜೊತೆ ಹಂಚಿಕೊಂಡಿದ್ದರೆ ತನ್ನ ಪ್ರೀತಿಯಲ್ಲಿ ಗೆಲ್ಲುತ್ತಿದ್ದಳೋ ಏನೋ. ಆದರೆ ತನ್ನ ನಿರ್ಧಾರವನ್ನು ತಿಳಿಸದೆ ಆತ್ಮಹತ್ಯೆಗೆ ಮನಸು ಮಾಡುತ್ತಾಳೆ. ಪರಿಣಾಮವಾಗಿ "ತಂದೆಯ ಮನಸನ್ನು ನೋಯಿಸಬಾರದೆಂದಿದ್ದರೂ ನೋಯಿಸದೇ ಹೋಗಲಿಲ್ಲ. ತಾನು ಬಾಳಲಿಲ್ಲ" (ಪ್ರೊ.ಎ.ವಿ. ನಾವಡ – ಪುಟ ೧೩)

ತಂದೆಯ ಘನತೆ ತನ್ನ ಪ್ರೀತಿ ಎರಡನ್ನೂ ಉಳಿಸಲು ಹೊನ್ನಿ ಸಾಯಲು ಮಾಡಿದ ತೀರ್ಮಾನ – ಕಟ್ಟಳೆಯನ್ನು ಮೀರುವ ಗೌಡನ ಬಯಕೆ – ತಂದೆ ಮಗಳು ಎದುರೆದುರು ಮಾತಾಡಬಾರದೆನ್ನುವ ಕಟ್ಟಳೆ ತಂದ ದುರಂತವನ್ನು ಹೊನ್ನಿಯ ಪಾತ್ರದ ಮೂಲಕ ಅಭಿವ್ಯಕ್ತವಾಗಿದೆ.

ಕವಿ ಕಡೆಂಗೋಡ್ಲು ಶಂಕರ ಭಟ್ಟರ ಕಥನಕವನ ಕ್ಯಾಂಬೆಲ್ (Cambell) ಕವಿಯ 'Lord Vellins Daughter' ಎಂಬುದರಿಂದ ಸ್ಫೂರ್ತಿಗೊಂಡಿದೆ. ಬಿ.ಎಂ. ಶ್ರೀಯವರು ಇದನ್ನು ಕಾರಿ ಹೆಗ್ಗಡೆಯ ಮಗಳು ಎಂದು ಅನುವಾದಿಸಿದ್ದಾರೆ. ಕಾರಿ ಹೆಗ್ಗಡೆಯ ಮಗಳು ಕಥನವುಳ್ಳ ಕವನ

ಪಡುವದಿಬ್ಬದ ಗೌಡನೊಬ್ಬನು
ಬಿಡದೆ ತೊರೆಯಿಂದ ಬಾಗಿ ಕೊಂಡನು
ತಡೆಯದೀಗಲೆ ಗಡುವ ಹಾಯಿಸು,
ಕೊಡುವೆ ಕೇಳಿದ ಹೊನ್ನು

ಎಂದು ಆರಂಭಗೊಂಡು ಪ್ರಣಯ ಕಥೆಯೊಂದನ್ನು ನಿರೂಪಿಸುತ್ತದೆ. ಕಡೆಂಗೋಡ್ಲು ಮತ್ತು ಶ್ರೀಯವರು ಒಂದೇ ವಸ್ತುವನ್ನು ತಮ್ಮದೇ ಆದ ರೀತಿಯಲ್ಲಿ ಕಥನಕವನ ತಂತ್ರಕ್ಕೆ ಅಳವಡಿಸಿಕೊಂಡಿದ್ದಾರೆ.

ಕಾರಿ ಹೆಗ್ಗಡೆಯ ಮಗಳ ಪ್ರೀತಿ ಹೊನ್ನಿಯ ಪ್ರೀತಿಗೆ ಸರಿಯಾದದ್ದು. ಅವಳ ಮನೋವೇದನೆಯನ್ನು ಹೊನ್ನಿಯ ದುಗುಡ, ತುಮುಲಗಳಿಗೆ ಹೋಲಿಸಲಾಗಿದೆ.

ಓಡಿ ಬಂದೆವು ಮೂರು ದಿವಸ,
ಜಾಡ ಹಿಡಿದು ಹಿಂದೆ ಬಂದರು
ನಮ್ಮ ನೀ ಕಣಿವೆಯಲಿ ಕಂಡರೆ
ಚಿಮ್ಮಿ ಹರಿವುದು ನೆತ್ತರು.

ಎಂಬಲ್ಲಿ ತನ್ನ ಪ್ರಿಯನೊಂದಿಗೆ ಕಾರಿ ಹೆಗ್ಗಡೆಯ ಮಗಳು ಓಡಿಬರುತ್ತಾಳೆ. ಅವಳ ತಂದೆಗೆ ಈ ಮದುವೆಗೆ ವಿರೋಧವಿದೆ. ಆತ ಅವರ ಪ್ರೀತಿಯನ್ನು ಪುರಸ್ಕರಿಸಲಾರ ಎಂಬ ಧೋರಣೆ ಕಾರಿ ಹೆಗ್ಗಡೆಯ ಮಗಳದು.

ಅದೇ ರೀತಿ ಹೊನ್ನಿ ಕೂಡಾ ತನ್ನ ತಂದೆಗೆ ಎದುರಾಡದ ಸ್ವಭಾವದವಳು. ಹಾಗಂತ ಒಲಿದ ಚೆನ್ನನನ್ನು ಮರೆಯಲಾರದವಳು. ಆದುದರಿಂದ ತನ್ನ ಪ್ರೀತಿಯನ್ನು ಉಳಿಸಬೇಕು. ಜೊತೆಗೆ ತನ್ನ ಮನೆತನದ ಮರ್ಯಾದೆಯೂ ಉಳಿಯಬೇಕೆಂದು ನಿರ್ಧರಿಸಿ ಪಡುಗಡಲಿನ ಕಡಲಿನಲ್ಲಿ ಶಾಶ್ವತವಾಗಿ ಲೀನಳಾಗುತ್ತಾಳೆ.

ಆಗ ಮಾತ್ರ ಹೊನ್ನಿಯ ತಂದೆ ತನ್ನ ಮಗಳ ಪ್ರೀತಿಯನ್ನು ಪುರಸ್ಕರಿಸುವ ಮನೋಭಾವ ಹೊಂದಿ ತನ್ನ ಮಗಳ ಮದುವೆಯನ್ನು ಆಕೆ ಒಲಿದ ಚೆನ್ನನೊಂದಿಗೆ ನೆರವೇರಿಸಲು ಸಿದ್ಧನಾಗುತ್ತಾನೆ. ಆದರೆ ಸಮಯ ಮೀರಿ ಹೋಗಿರುತ್ತದೆ.

ಅದೇ ರೀತಿ ಕಾರಿ ಹೆಗ್ಗಡೆಯ ಮಗಳೂ ಕೂಡಾ ಕಡಲಿನಲಿ ಲೀನವಾಗುತ್ತಾಳೆ. ಅದನ್ನು ನೋಡಿದ ಕಾರಿ ಹೆಗ್ಗಡೆ

ಅಲೆಗಳಬ್ಬರದಲಿ ಮೀಟಿ
ಮುಳುಗುತಿಹರು, ಏಳುತಿಹರು–
ಕರೆಗೆ ಬಂದ ಕಾರಿ ಹೆಗ್ಗಡೆ
ಕರಗಿ ಮುಳಿಸು ಅತ್ತನು !

ತನ್ನ ಪ್ರೀತಿಗಾಗಿ ಪ್ರಾಣತ್ಯಾಗ ಮಾಡಿದ ಕಾರಿ ಹೆಗ್ಗಡೆ ತನ್ನ ಮಗಳಿಗಾಗಿ

ಮರಳು ಮರಳು, ಮಗಳೆ ಎಂದ,
ಮೊರೆವ ಕಾಯು ಗಂಟಲಿಂದ !
ಮರೆತೆ, ಒಪ್ಪಿದೆ ನಿನ್ನ ನಲ್ಲನ
ಮರಳು ಕಂದಾ ಎಂದನು.

ಹೊನ್ನಿಯ ಮದುವೆ ಕಥನಕವನದ ರೀತಿಯೇ ಕಾರಿ ಹೆಗ್ಗಡೆಯ ಮಗಳು ಕೂಡಾ ಒಂದು ದುರಂತ ಪ್ರಣಯ ಕಥನ. ಕಾರಿ ಹೆಗ್ಗಡೆಯ ಮಗಳೂ ಕೂಡಾ ದುರಂತ ನಾಯಕಿಯಾಗಿ ಹೊನ್ನಿಯ ಸಾಲಿಗೆ ಸೇರುತ್ತಾಳೆ.

ಕಡೆಂಗೋಡ್ಲು ಶಂಕರ ಭಟ್ಟರ ಮತ್ತೊಂದು ಕಥನಕವನ 'ಮಾದ್ರಿಯಚಿತೆ' ಇದು ಅವರ ಸ್ವತಂತ್ರ ಕವನ. ಇಲ್ಲಿ ಕೂಡಾ ಕ್ರಿಯೆಯನ್ನು ನಡೆಸುವವಳು ಹೆಣ್ಣು. ನಡೆವಹಾದಿ ಹಾಗು ಸಾಧಿಸುವ ಪರಿಣಾಮ ಬೇರೆಬೇರೆ. ಕಡೆಂಗೋಡ್ಲು ಅವರ ಎಲ್ಲ ಜೀವದನಿ ಹೆಣ್ಣಿನ ಮೂಲಕವೇ ಹೊರ ಹೊಮ್ಮಿರುವುದು ಗಮನಾರ್ಹ ಅಂಶ.

ಮಾದ್ರಿಯಚಿತೆ ಮಹಾಭಾರತದ ಪಾಂಡು ಮಾದ್ರಿಯರ ದುರಂತ ಸಮಾಗಮವನ್ನು ಹಿನ್ನೆಲೆಯಾಗಿರಿಸಿಕೊಂಡು ಬರೆದ ಕಾವ್ಯ ಖಂಡ. ಎಚ್.ಎಸ್. ವೆಂಕಟೇಶ ಮೂರ್ತಿಯವರು ಪ್ರೀತಿ ದೂರವಾದ ಬದುಕಿಗಿಂತ ಪ್ರೀತಿಯೊಂದಿಗೆ

ಬರಬಹುದಾದ ಸಾವನ್ನೆದುರಿಸುವುದೇ ಪಾಂಡು ಮಾದ್ರಿಯರ ಕೊನೆಯ ನಿಲುವಾಗುವುದನ್ನು ಕವಿತೆ ಅದ್ಭುತವಾಗಿ ಚಿತ್ರಿಸುತ್ತದೆ ಎಂದು ಗುರುತಿಸಿದ್ದಾರೆ.

ಈ ಕಾವ್ಯದಲ್ಲಿ ಪಾಂಡುವಿನ ಮರಣಕ್ಕೆ ಪ್ರಾಧಾನ್ಯವಿಲ್ಲ. ಅದು ಕತೆಯ ಒಂದು ಅಂಗ ಅಷ್ಟೇ. ಪುರಾಣದ ಕತೆಗೆ ಬದಲಾಗಿ ವಿಧಿಯನ್ನು ಎದುರು ಹಾಕಿಕೊಂಡು ತನ್ನ ಹಾಗು ಪತಿಯ ಸಾವನ್ನು ತಾನಾಗಿಯೇ ತಂದುಕೊಂಡವಳು ಮಾದ್ರಿ.

ಕವಿ ಎಂ. ಗೋಪಾಲಕೃಷ್ಣ ಅಡಿಗ ಅವರ ಅಭಿಪ್ರಾಯದಂತೆ ಮಾದ್ರಿಯಚಿತೆ ಒಂದು ಚಿರಂತನವೆನಿಸಬಲ್ಲ ರಸತರಂಗಿಣಿ. ಕವಿ ಕೌಶಲ್ಯವು ಪದ್ಯ ಪದ್ಯದಲ್ಲೂ ಪ್ರಕಟವಾಗಿದೆ.

ಅನುಭವವು ಸವಿಯಲ್ಲ – ಅದರ ನೆನಪೇ ಸವಿಯು<br>
ಅದ ಕದ್ದು ಮೇಯದೆ ಮನವು<br>
ಆಗ ಮೂಸೆಯ ಚಿನ್ನದಂತೆ ನೀರಪ್ಪುದೆಡೆ<br>
ಕರಗುತಲ್ಲಲ್ಲಿ ಚೆಲ್ಲುವುದು.

ಇದು ಕಾಡಿನಲ್ಲಿ ನವೆಯುತ್ತಿದ್ದ ಪಾಂಡು ಮಾದ್ರಿಯರ ಬದುಕಿಗೆ ಕವಿಯ ಪ್ರತಿಕ್ರಿಯೆ.

- ವ್ಯಾಸರ ಭಾರತದ ಪ್ರಕಾರ

ಭೀಷ್ಮ ಮದ್ರದೇಶದ ರಾಜಧಾನಿಗೆ ಹೋಗಿ ಮೂರು ಲೋಕಗಳಲ್ಲೂ ಸುಂದರಿಯೆಂದು ಪ್ರಸಿದ್ಧಳೂ, ಮುದ್ರ ರಾಜನ ಮಗಳೂ, ಭೂಲೋಕದಲ್ಲಿ ಅಸದೃಶ ಸೌಂದರ್ಯವುಳ್ಳವಳೆಂದು ಎಲ್ಲಾ ರಾಜರುಗಳಲ್ಲಿ ಖ್ಯಾತಿ ಹೊಂದಿದವಳೂ ಆದ ಮಾದ್ರಿಯನ್ನು ಪಾಂಡುವಿಗಾಗಿ ಧನವನ್ನು ಕೊಟ್ಟು ಕೊಂಡುಕೊಂಡನು. ಬಳಿಕ ಭೀಷ್ಮನು ಅವಳನ್ನು ಪಾಂಡುವಿಗೆ ವಿವಾಹ ಮಾಡಿಸಿದನು [೨].

ಕಾಡಿನಲ್ಲಿ ಸುತ್ತಾಡುತ್ತಿರುವಾಗ ಕಿಂದಮನೆಂಬ ಮುನಿಯ ಶಾಪಕ್ಕೊಳಗಾಗಿ ತನ್ನ ಸತಿಯರ ಜತೆ ಪಾಂಡು ಸಮಾಗಮದ ಸುಖದಿಂದ ವಂಚಿತನಾಗಬೇಕಾಗುತ್ತದೆ.

ಆದುದರಿಂದ ಪಾಂಡು ಶತಶೃಂಗ ಪರ್ವತದಲ್ಲಿ ಜೀವವನೆ ಜಗ್ಗಿಸುತ, ಭಾವವನೆ ಕುಗ್ಗಿಸುತ ನಿಸ್ಸಂಗತನಾಗಿರುವ ತನುವ ಸವೆಯುತಿರ್ದನು. ಜತೆಗೆ ಮಾದ್ರಿಯೂ ಕಾಡಿನಲ್ಲಿ ಗಂಡನೊಂದಿಗೆ ನವೆಯುತ್ತಿದ್ದಳು.

ಮಾದ್ರಿ ಪತಿವ್ರತಾ ಶಿರೋಮಣಿ ಪತಿಯೇ ಅವಳ ಜೀವಿತ ಸರ್ವಸ್ವ ಅವನಿಲ್ಲದಿರೆ ಇವಳಿಲ್ಲ. "ಗರತಿಯಾಗಿ ಸೇವೆಗೈಯೆ ಹೋಗದಿರುವುದು ಒಳಿತಲ್ಲವೆಂದು ನಿಶ್ಚಯಿಸಿ, ಹೆಣ್ಣನಡೆಗೆ ಹಂದರೆಂಬ ಮಸಣವೆಂಬ ಗಡಿಗಳೆ?" ಎಂದು ಸ್ತ್ರೀ ಧರ್ಮಕ್ಕೆ ಒಂದು ವ್ಯಾಪಕವಾದ ಸೂತ್ರವನ್ನು ನೀಡಿದವಳು.

ಪತಿಯೊಡನೆ ಸಹಗಮನವೆಸಗಿದವಳು. ಅದೂ ಯಾರ ಒತ್ತಾಸೆಗಾಗಿಯೂ ಅಲ್ಲ. ತನ್ನ ಆತ್ಮಪ್ರೀತಿಗಾಗಿ. ತನ್ನ ಜನ್ಮ ಸಾಫಲ್ಯಕ್ಕಾಗಿ [೩].

ಕವಿ ಹೇಳುವಂತೆ ಪಾಂಡುರಾಜನೋ ಪುರುಷಜನ್ಮಿಯಲ್ಲವೇ ? ಎಂತೋ ಇಂದ್ರಿಯವ ಬಿಗಿದು, ಧಾರಿಣಿಗೆ, ತನಗಿಹ ಬಂಧ ಎಂದು ಹರಿದಂದೆಂದು – ಎಂಬಂತೆ "ಈ ಕಾಡು ನಾಡಿನಿಂ ಪಡಿಮಿಗಿಲೆನಗೆ" ಎಂದು ಮನದಿ ತನಗೆ ಸಾಂತ್ವನ ಹೇಳುತ್ತಾನೆ.

ದುಗುಡವನು ಸುಖದ ಪಾಕದಲೆರೆದು ಸವಿಯುತಿಹ ರಸಿಕರಿಗೆ ಬಾಳು, ಬಾಳುವೆಯ ಪಾಡು ಎನ್ನುವ ಆಲೋಚನೆ ಪಾಂಡುವನ್ನು ಗಟ್ಟಿಗೊಳಿಸುವುದು. ದುಃಖತನಗೊಬ್ಬನಿಗಲ್ಲ. ಬೇರೆಬೇರೆ ರೂಪದಲ್ಲಿ ಮನವ ಮಿಗಹಕ್ಕಿಗಳ ಹೃದಯಾಂತರಾಳದಾನಂದ ಒಂದೇ ಎಲ್ಲದರಲ್ಲಿ ತನ್ನನ್ನೂ ತನ್ನನ್ನು ಎಲ್ಲದರಲ್ಲೂ ಕಾಣುವ ವಿಶೇಷ ಪರಿಸ್ಥಿತಿ ಅವನಿಗೆ ಸಿದ್ಧಿಸುತ್ತದೆ.

ಆದರೆ ಜೊತೆಗಾತಿ ಮಾದ್ರಿಯ ಬಗೆ ಬೇರೆ ಕಷ್ಟರಾಶಿಯ ಹೊತ್ತು ಬಾಳಲೆಂದೇ ಪಳಗಿ ಬಂದ ಹೆಣ್ಣಲ್ಲವೇ?

ಕಾರಿರುಳೊಳಗು ಕಣ್ಣ ಬಿಟ್ಟು ನಡೆವರ ದಿಟ್ಟಿ
ಮೇಲೆ ಬರಬರುತ ನಸುಬೆಳಕ ಕಾಣುವ ತರದಿ
ಅಡವಿ ಬಾಳ್ವೆಯ ದುಗುಡದೊಳಗು ನಸುಸಂತಸವ
ಒಡಗೂಡಿಕೊಂಡಿರಲು ಶಾಂತಿಯನು ಬಯಸುತ್ತ
ರವಿಕಿರಣ ಹೋಗದಿರುವ ಗುಯ್ಯೆಂಬ ಕಾನನದಿ
ಹುರಿದು ಹೃದಯದ ರಸವ ತಾನೆ ಸವಿಯುವಳಲ್ಲಿ

ಕವಿ ಮರುಕ ಮಾದ್ರಿಯ ಪಾತ್ರಪೋಷಣೆಯನ್ನು ರಸವತ್ತಾಗಿಸಿದೆ. ಹೇಗೆಂದರೆ 'ಕಷ್ಟರಾಶಿಯ ಹೊತ್ತು ಬಾಳಲೆಂದೇ ಪಳಗಿ ಬಂದ ಹೆಣ್ಣಲ್ಲವೇ? ಎಂದಾಗ ಮಾದ್ರಿ ಸಾಮಾನ್ಯವಾದ ಹೆಣ್ಣಲ್ಲ. 'ಪಳಗಿ' ಬಂದ ಹೆಣ್ಣು. ಅಂದರೆ ಮಾದ್ರಿಯದು ಮಾಗಿದ ವ್ಯಕ್ತಿತ್ವ ಎಂಬುದು ಗಮನಾರ್ಹ ಅಂಶ.

ಕಾರಿರುಳಲ್ಲಿ ಕಣ್ಣು ಬಿಟ್ಟು ನಡೆವವರಿಗೆ ನಿಧಾನವಾಗಿ ದಿಟ್ಟಗೆ ನಸುಬೆಳಕು ಕಾಂಬಂತೆ ಅಡವಿಯ ನೀರಸ ಬಾಳಲ್ಲೂ ಸಂತಸವನ್ನು ಹುಡುಕಲು ಪ್ರಯತ್ನಿಸುವವಳು ಮಾದ್ರಿ.

ಒಂದರ್ಥದಲ್ಲಿ 'ಮಾದ್ರಿಯ ಚಿತೆ' ಕಥನವನ್ನು ಅವಲೋಕಿಸಿದಾಗ ಮೃತ್ಯುವಿಗೆ ಹೆದರಿ ಸುಳಿವನ್ನು ದೂರ ಮಾಡಿ ಬೆಂದು ಬದುಕುವುದಕ್ಕಿಂತ ಬಯಸಿದುದನ್ನು ಪಡೆದು ಅರೆ ಕ್ಷಣ ಬದುಕಿದರೂ ಸಾಕೆಂಬ ನಿರ್ಧಾರವನ್ನು ಮಾದ್ರಿ ತಳೆದಂತೆ ಭಾಸವಾಗುತ್ತದೆ.

ಏಕೆಂದರೆ ನೀವತ್ತ ! ನಾಪಿತ್ತ ! ನಮ್ಮ ನಡುನಾಡಿನಲಿ ತಾರೆಗಳು ಬರಿದೆ ಮಿರುಗುವವು ನಂದುತಲಿಹವು ಎಂಬಲ್ಲಿ ಪಾಂಡುವನ್ನು ಮಾದ್ರಿ ಸೂಚ್ಯವಾಗಿ ಬಯಸುತ್ತಿದ್ದಾಳೆ ಎಂಬುದು ವೇದ್ಯವಾಗುತ್ತದೆ. ಅದಕ್ಕಾಗಿ

ಬದುಕನ್ನು ಉನ್ಮತ್ತಗೊಳಿಸುವ ಯೌವನ ಹಾಗೂ ಜಗತ್ತನ್ನು ಉನ್ಮುಖಗೊಳಿಸುವ ವಸಂತವನ್ನು ತನ್ನ ಒಳಗೆ ಬರುವಂತೆ ಕೂಗಿ ಕರೆಯುವಳು. ತನ್ನ ಬಳಿಗೆ ಬರುವಂತೆ ಕೂಗಿ ಕರೆಯುವಳು. ತನ್ನ ಬಾಳ ಯೌವನದೊಳಗಿನ ಅವರ ಅಭಿಮತ ತಿರುಗಿದೆ.

ನಿನ್ನೊಡವೆ ಯೆನಲಿದೇ ಕಾಮವಾಸನೆಯೆಂಬ
ಕೂರಸಿಯ ಧಾರೆ? ಒರೆಯಕ್ಕಿಕೊಳ್ಳುವೆನಿದನು.

ಹೀಗೆ ಹೇಳುವಾಗ ಅವಳ ಸಂಯಮವೂ ಅನಿವಾರ್ಯತೆಯೊಡನೆ ಎಂತಾದರೂ ಹೊಂದಿಕೊಂಡು ಹೋದೆನೆಂಬ ಅವಳ ಆತ್ಮಪ್ರತ್ಯಯವೂ ವ್ಯಕ್ತವಾಗಿದೆ.[೪]

ಮುಂದೆ

ಜೀವಿಗಳ ಬಾಳ್ವೆಯು ಯೌವನವೇ ಸುಗ್ಗಿಯಲಿ ?
ಸುಗ್ಗಿಯೇ ವಿಶ್ವಜೀವನದ ಯೌವನವಲಾ ?
ಒಂದೆ ತೊಟ್ಟಿನ ಒಂದೇ ಗುಟ್ಟಿನೊಂದೇ ಬೆಡಗಿ
ನೊಂದೇ ಕಂಪಿನ ತಂಪಿನೆರಡು ಮೊಗ್ಗೆಗಳಂತೆ,
ಸುಗ್ಗಿಯೇ ! ಯೌವನವೇ ! ಬಾಳಿ ಬದುಕಿರಿ, ಬೆದಕಿ
ಅವ ಬದುಕಿನೊಳಾವ ಸತ್ವವಿದೆಯಾ ! ಹುಡುಕಿ !

ಎಂದೆನ್ನುವಲ್ಲಿ ಇಹದಲ್ಲಿ ಸುಖವನ್ನು ಪಡೆಯಲು ಹೋರಾಡಬೇಕು ಎನ್ನುವ ತತ್ವವನ್ನು ಮಾದ್ರಿ ಪ್ರತಿಪಾದಿಸುವುದು ಕಂಡುಬರುತ್ತದೆ. ಪುರಾಣದ ಮಾದ್ರಿಗಿಂತ ಭಿನ್ನವಾಗಿ ಈ ಕಥನಕವನದಲ್ಲಿ ಮಾದ್ರಿಯನ್ನು ಚಿತ್ರಿಸಲಾಗಿದೆ.

ಕಾಮವಾಸನೆಯನ್ನು ಒರೆಗಿಕ್ಕಿಕೊಳ್ಳಬಲ್ಲೆನೆಂಬ ಹುಸಿ ಧೈರ್ಯವನ್ನು ತೋರಿದರೂ, ಅವಳ ತೋರಿಕೆಯ ಧೈರ್ಯದಲ್ಲಿ ನಿರಾಶೆಯ ನೀಳ್ದನಿಯೂ ತನ್ನ ಜೀವನದ ಅಪೂರ್ಣತೆಯ ಅರಿವಿನಿಂದ ಉಂಟಾಗುವ ಒಂದು ತರದ ಆಂತರಿಕ ಕಾತುರವೂ ಬೆರೆತುಕೊಂಡಿದೆ ಎಂದು ಕವಿ ಗೋಪಾಲಕೃಷ್ಣ ಅಡಿಗರು ಅಭಿಪ್ರಾಯ ಪಡುತ್ತಾರೆ.

ಮಾದ್ರಿ ಬದುಕು ಅಪೂರ್ಣ ಎಂಬ ಸತ್ಯ ಹೊಳೆವಾಗ ತಲ್ಲಣಗೊಳ್ಳುತ್ತಾಳೆ. 'ದೈವ ಬಲವಾರ್ಥಿಯಲಿ ಮನುಜ ಬಲ ಒಂದು ತೆರೆ' ಎಂಬ ಕಟು ವಾಸ್ತವದ ಅರಿವೂ ಆಕೆಗಿದೆ. ಅದಕ್ಕಾಗಿಯೇ,

ಬದುಕಬೇಕೈ ಬಾಳಬೇಕು ; ಲೋಕವನ್ನೆಲ್ಲ
ಜಯಿಸಬೇಕೈ ಆಳಬೇಕೆಂದು ಗಳೆಹುವುದೆ
ನಮ್ಮ ಅಧಿಕಾರ ; ಅಂತೆಸಗುವುದೆ ನಮ್ಮ ಬಲ ;

ಅನಿತುದ್ಧ ಪೌರುಷವ ಉಕ್ಕೇರಿಸುವುದೆ ಚಲ ;
ಅನುಭವ ತರಂಗಗಳ ಈಜಿ ದಾಟುವುದೇ ಫಲ ;
ಹೊಸ ಕಲ್ಪನೆಯೇ ನಮ್ಮ ಜೀವ ಕಾಡು ಹೊಲ
ಬಾ ಹೋಗು ನಿಲ್ಲೆಂದು ಇಂದ್ರಿಯವ ಜೋಡಿಸುವ
ಆ ದಿವ್ಯ ಶಕ್ತಿಯೊಂದಿರುವುದದೆ ದೈವ ಬಲ.

ಹೀಗೆಂದು ಶಾಪಕ್ಕೆ ಹೆದರುವ ವ್ಯಕ್ತಿತ್ವದ ಹೆಣ್ಣಾಗಿ ಮಾದ್ರಿ ನಮಗೆ ಕಾಣಲಾರಳು. ಯಾಕೆಂದರೆ

ಮರೆತು ಹೋಗು ವಿರಹ ! ಜಾರಿ ಹೋಗಲಿ ದುಗುಡ !
ಕಂಬನಿಯ ಬುಗ್ಗೆ ಬತ್ತಲಿ ! ಸುಯ್ಯ ರೋದನದ
ಮಿಡುಕ ಮರೆಹೋಗಲಿ ಸುಗ್ಗಿಯ ಚಿಗುರ ಕೆಂಪುಗಳ !
ಉಸಿರು ಹೆಸರಿನಲಿ ಕಮ್ಮೆಲರ ನೀಳೆಸಳಿನಲಿ !
ಯೌವನ ವಸಂತರಾಜರ ಬರವಿನಲಿ ನಲಿದು
ಪುಲಕಗಳೆ ಗುಡಿಗಟ್ಟಿ ನಗೆಯ ಮಾಲೆಯ ಕೋದು
ಉತ್ಸವದಿ ಕುಣಿದು ಕಾಲಂದುಗೆಯ ದನಿಯಿಂದ
ಮೃತ್ಯುವಾಗ ಮನವಾರ್ತೆಯ ಮರಸಿ ಮರೆದಿರ್ಪೆ.

ಎಂದು ಕುಸಿಯುತ್ತಿರುವ ಕಾಲನ್ನು ಗಟ್ಟಿಯಾಗಿ ಊರಿಕೊಳ್ಳುತ್ತಾಳೆ. ಯೌವನ ವಸಂತ ರಾಜರ ಬರವಿನಲಿದು, ಮೆಲ್ಲಗೆ ಮೊಗವನ್ನು ಬೆಳಗುತ್ತಿರಲು, ಮಾದ್ರಿ ನಲಿದು ಸಂಭ್ರಮ ಗೊಳ್ಳುತ್ತಾಳೆ.

ಉತ್ಸವದಿ ಕುಣಿದು ಕಾಲಂದುಗೆಯ ದನಿಯಿಂದ ಮೃತ್ಯುವಾಗ ಮನೆವಾರ್ತೆಯ ಮರಸಿ ಮರೆದಿರ್ಪ ಎಂಬ ಅವಳ ಮಾತಿನಲ್ಲಿ ಧೃಢ ಚಿತ್ತವಿದೆ. ಬದುಕನ್ನು ಬಂದ ಹಾಗೆ ಸ್ವೀಕರಿಸುವ ಜಾಯಮಾನ, ವಾಸ್ತವವನ್ನು ಒಪಿಕೊಳ್ಳುವ ಮನೋಧರ್ಮದ ಪ್ರತಿನಿಧಿಯಾಗುತ್ತಾಳೆ. ಹಾಗಾಗಿಯೇ ಕವಿ ಮಾದ್ರಿಯಿಂದ ನುಡಿಸುವ ಈ ಮಾತುಗಳು ಉಚಿತವೆನಿಸುತ್ತದೆ.

ಒಡಲು ಸಾವಿನ ಮಾವ ಹೊಲವಾದರೇನಣ್ಣ ?
ತೊಡಿಸುವೆನು ವನದೇವಿ ಕೊಡುವ ಕಾಣಿಕೆಗಳನ್ನು
ಬಂದು ಮೇಯುವ ಮೃತ್ಯು ಆನಂದದಲಿ ಬಂದು
ತಿಂದು ತೇಗಲಿ ! ಧನ್ಯವೆನಿಸಲಿದರಾಯಷ್ಯ !

ಈ ರೀತಿ ತನ್ನೊಡಲ ನೋವಿನ ತೀವ್ರತೆಯನ್ನು ಕಡಿಮೆಗೊಳಿಸುತ್ತಾಳೆ.

ದೈವಬಲವಾರ್ಧಿಯಲಿ ಮನುಜ ಬಲ ತೆರೆಯೆಂದು,
ಅದರೊಳಗೆ ಸುಳಿವುದೇ ಕೊರೆವುದೇ ಗರ್ಜಿಪುದೆ
ನಮ್ಮ ಪಾಡೆಂದು ಬಗೆ ತಂದು ಧೃತಿಯಂತಂದು
ಕಣ್ಣೀರ ತೊರೆದು ಬಗೆ ಮೋಡಗಳ ನೀಡಾಡಿ
ಎಲ್ಲ ಭನನಗಲಿದರು ಮೆರೆಯುತಿರ್ದಳು ಮಾದ್ರಿ.

ತನ್ನನ್ನು ತಾನು ಸಂತೈಸುವ, ವಿಧಿ ನಿಯಮವನ್ನು ಒಪ್ಪಿಕೊಳ್ಳುವ ಮಾದ್ರಿಯನ್ನು ನಾವು ಕಾಣಬಹುದು.

ಆದರೆ ಪಾಪವೆಂದು ಶಾಪವೆಂದು
ಕೆಟ್ಟ ವಿಧಿಯ ಕೋಪವೆಂದು
ಹಳಿವುದೇಕೆ ? ಜರೆವುದೇಕೆ ? ಪ್ರಣಯದಗ್ನಿ ಸುಟ್ಟಿತು.

ವಿಧಿನಿಯಮದಂತೆ ವಸಂತ ಋತು ಕಾಮದ ಬಯಕೆಯೊಡನೆ ಸಂಚುಹೂಡಿ ಸಾವಿನ ತೆಕ್ಕೆಯೊಳಕ್ಕೆ ಮಾಡಿತು. ಮಾದ್ರಿಯ ಮನಸಿನಲ್ಲಿ ಪ್ರೇಮರಸ ತುಂಬಿ, ಹೃದಯದಲ್ಲಿ ವಿರಹದ ಕಿಡಿ ಹೊತ್ತಿತು.

ಮಾಯಕಟ್ಟಿ ಕುಣಿಸುತಿರುವ
ಮಣ್ಣ ಬೊಂಬೆ ಅರಸಿ ಮಾದ್ರಿ
ಅರಸನೆಡೆಯ ಪಡೆಯಲೆಂದು ಹಿಂದೆ ಮುಂದೆ ನಡೆದಳು.
ವಸಂತ ಮಾಸದ ಆ ಚೆಲುವಿನ ದಿನ ಮಾಯಕಟ್ಟಿ ಕುಣಿ
ಸುತ್ತಿರುವ ಮಣ್ಣ ಬೊಂಬೆ ಅರಸಿ ಮಾದ್ರಿ
ಪಾಂಡುವಿನ ಬಳಿ ಬಂದಾಗ
ಅವಳ ತೋಳ ಸೋಂಕಿನಿಂದ
ಅರಸಗಿಂತು ಬಂತು ಚಂದ !
ಆಹ ! ಹೆಣ್ಣ ತೋಳು ಯಮನ ಕೈಯ ಕುಂಚವಾದುದೆ ?

ಎಂಬ ಕಾವ್ಯಾತ್ಮಕ ಮಾತು ಪಾಂಡು ಮಾದ್ರಿಯರ ದುರಂತದ ಅಂತ್ಯವನ್ನು ಸೂಚಿಸುತ್ತದೆ. ವಿಷಾದ ಹಾಗು ಪ್ರೀತಿ ಪಾಂಡುವಿನ ಸಾವನ್ನು ಸುಂದರಗೊಳಿಸಿದ ಬಗೆ ಇಲ್ಲಿ ವರ್ಣಿತವಾಗಿದೆ.

ಮಾದ್ರಿ ಸೀತೆಯಂತೆ ಕಷ್ಟ ಜೀವಿ. ಆದರೆ ಸೀತೆಯಂತೆ ಪರಿತ್ಯಕ್ತೆಯಾಗಿ ಭೂಗರ್ಭ ಸೇರಿಕೊಳ್ಳುವ ಸ್ಥಿತಿ ಮಾದ್ರಿಗಿಲ್ಲ. ಬದಲದಿಗೆ ತನ್ನ ಸಹವಾಸವು ಪತಿಗೆ ಅಪಮೃತ್ಯುಕಾರಕ ಎಂಬುದು ಗೊತ್ತಿದ್ದೂ, ಪತಿ ತನ್ನ ಸಹವಾಸವನ್ನು ಬಯಸುವಾಗ ಮತ್ತು ಆಕೆಗದು ಅನಿವಾರ್ಯವೂ ಮತ್ತು ಅತ್ಯಂತ ಪ್ರಿಯವೂ ಆದಾಗ ಅವಕಾಶವನ್ನು ಎದುರಿಸಿ ದುರಂತ ನಾಯಕಿಯಾಗುತ್ತಾಳೆ.

'ಮಾದ್ರಿಯ ಚಿತೆ' ಹೆಸರೇ ಸೂಚಿಸುವಂತೆ ಮಾದ್ರಿಯ ಸುತ್ತ ಹೆಣೆದ ಕತೆ. ಇಲ್ಲಿ ಕವಿ ಕುಂತಿಯ ಪ್ರಸ್ತಾಪ ಮಾಡುವುದಿಲ್ಲ ಎನ್ನುವುದನ್ನು ಗಮನಿಸಬೇಕು. ಯಾಕೆಂದರೆ ಪತಿ ಪ್ರೇಮದಿಂದಲೇ ಆತನ ಮಕ್ಕಳ ಪಾಲನೆಗಾಗಿ ಕುಂತಿ ಸಹಗಮನ ಮಾಡದೆ ಉಳಿಯುತ್ತಾಳೆ.

ಮೂಲ ಮಹಾಭಾರತಕ್ಕಿಂತ ಇಲ್ಲಿ ಮಾದ್ರಿಯ ಪಾತ್ರ ಭಿನ್ನವಾಗಿದೆ. ವ್ಯಾಸ, ಪಂಪ, ಕುಮಾರ ವ್ಯಾಸರು ಚಿತ್ರಿಸಿದ ಕತೆಯಲ್ಲಿ ಪಾಂಡು ರಾಜನೇ ಮಾದ್ರಿಯನ್ನು ಬಯಸಿ ಸಮಾಗಮಕ್ಕಾಗಿ ಹಾತೊರೆಯುತ್ತಾನೆ. ಆದರೆ ಕವಿ ಶಂಕರ ಭಟ್ಟರ ಕಥನಕವನದಲ್ಲಿ ಸ್ವತಃ ಮಾದ್ರಿಯೇ ಶಾಪವಿದೆಯೆಂದು ತಿಳಿದೂ ಸಾವಿಗೆ ಅಂಜದೆ

ಪತಿ ಪಾಂಡು ಚಕ್ರವರ್ತಿ ಸಮಾಗಮ ಹೊಂದುತ್ತಾಳೆ. 'ಮಾದ್ರಿಯ ಚಿತೆ' ಸಾವಿನ ಸುತ್ತ ಹೆಣೆದುಕೊಂಡಿದ್ದರೂ ಇಲ್ಲಿ ಸಾವು ಅನಿವಾರ್ಯ. ಮಾದ್ರಿಯ ಪಾತ್ರದ ಮೂಲಕ ಹೆಣ್ಣಿನ ಅಂತರಾಳವನ್ನು ಶೋಧಿಸುವ ಪ್ರಯತ್ನ ಮಾಡಿದ್ದು ಕವಿಯ ಹೆಚ್ಚಳ.

'ಮಾದ್ರಿಯ ಚಿತೆ' ಯಲ್ಲಿ ಕುಂತಿಯ ಪಾತ್ರ ಏನು? ಅವಳ ಉಲ್ಲೇಖ ಇದೆಯೆ?

ಮಾದ್ರಿಯ ಪಾತ್ರದ ವರ್ತನೆ ಸಾಂಪ್ರದಾಯಿಕ ಮನೋಧರ್ಮದ ಪ್ರತೀಕವೇ? ಮೂಲ ಮಹಾಭಾರತಕ್ಕಿಂತ ಇಲ್ಲಿ ಹೇಗೆ ಭಿನ್ನ?

'ನಲ್ಮೆ' ಕಥನಕವನ ಸಂಕಲನದೊಳಗಿರುವ ಇನ್ನೊಂದು ಕಥನಕವನ ಮುರಲೀನಾದ

ಎಲ್ಲಿಗೆ ಪಯಣವೂ ? ದಾರಿಗ ನಿನಗೆ ?
ಚೆಲ್ಲಿರೆ ಕತ್ತಲೆ ಹಗಲಿನ ಮೊಗಕೆ
ಸಾವಿನ ಬೀರುವ ಬಿತ್ತಲು ಸಂಜೆ
ಜೀವವ ಕರೆವುದು ; ನೀನಿತಂಜೆ !

ಎಂದು ಆರಂಭವಾಗುವ 'ಮುರಲೀನಾದ' ಕಥನಕವನದಲ್ಲಿಯೂ ಹೆಣ್ಣೇ ಕಥೆಯ ವಸ್ತು. ತನ್ನ ಗಾನಕ್ಕೆ ಮರುಳಾಗಿ ಬಂದ ಸ್ತ್ರೀಯನ್ನು ಮೊದಲು ಸ್ವೀಕರಿಸದ – ಒಲ್ಲದ ನಾಯಕ ಬಳಿಕ ಆಕೆಯ ನಿಷ್ಕಲ್ಮಷ ಪ್ರೀತಿಗೆ ತಾನೇ ಮರುಳಾಗುವ ಸನ್ನಿವೇಶ ಒದಗಿ ಬಂದು, ಒಲಿದು ಬಂದ ಹೆಣ್ಣನ್ನು ಸ್ವೀಕರಿಸುತ್ತಾನೆ.

'ಮುರಲೀ ನಾದ' ಕಥನಕವನವು ದುಃಖಾಂತವಾಗಿರದೆ ಸುಖಾಂತವಾಗಿದೆ. ವಿರಹದಿಂದ ನೊಂದ ಹೆಣ್ಣೊಬ್ಬಳು ವೇಷ ಮರೆಸಿ ತನ್ನ ಗೆಳೆಯನನ್ನು ಹುಡುಕುತ್ತಾ ಹೋಗುವಳು.

ಆ ಸಮಯ –
ಬಳಿಯಲೆ ಎಲೆಮನೆಯೊಂದಿಹುದಿಲ್ಲಿ
ಕಳೆವೆನು ವರ್ಷದ ದಿನದಂದದಲಿ ;

ಎಂಬ ವಿರಕ್ತ ಮುನಿಯೊಬ್ಬ ತರುಣಿಯನ್ನು ಕರೆದು ತನ್ನ ಮನೆಯಲ್ಲಿ ರಾತ್ರಿ ಕಳೆಯಲು ಆಸರೆ ನೀಡುತ್ತಾನೆ. ಮುನಿ ಮಾರುವೇಷದಲ್ಲಿದ್ದ ದಾರಿಗ ಯುವತಿಯ ಆತ್ಮ ಕತೆಯನ್ನು ಕೇಳುತ್ತಾನೆ.

ದಾರಿಗನ ವೇಷದಲ್ಲಿದ್ದ ಯುವತಿ ಹೇಳಿದ ಕತೆ, ಅದು ಹಿಂದೆ ಅದೇ ಮುನಿಯ ಮುರಲಿಯನಾದಕ್ಕೆ ಮರುಳಾಗಿ ಆಕೆ ಪ್ರೇಮ ಭಿಕ್ಷೆ ಬೇಡಿದಾಗ ಆತ ನಿರಾಕರಿಸಿದ ಕತೆಯಾಗಿರುತ್ತದೆ.

"ಊದಿದನಾತನು ಮುರಲಿಯನೊಮ್ಮೆ" ಎಂದು ಮುನಿ ಕೇಳಿದ ಪ್ರಶ್ನೆಗೆ ತರುಣಿ ಉತ್ತರಿಸುತ್ತಾಳೆ.

ಹೆತ್ತವರೆಲ್ಲಿಯೋ ಬಂಧುಗಳೆಲ್ಲಾ

ಎತ್ತಲಿಹರೋ ತಿಳಿದವಳಾನಲ್ಲ
ಕತ್ತಲೆಯಿದೆ, ಎನ್ನಯ ನೆಲೆಯುಹುದು
ಸುತ್ತಲು ಜಗವಿದೆ, ದಾರಿಯದಿಹುದು.

ಎಂಬ ಸಾಲಿನಲ್ಲಿ ಕವಿ ಪ್ರೇಮದ ಪರಿಯನ್ನು ವಿವರಿಸುವ ಯತ್ನ ಮಾಡಿದ್ದಾರೆ. ತಂದೆ, ತಾಯಿ, ಬಂಧು ಬಳಗ ಅರಿಯದ ಹೆಣ್ಣು. ಮುರಲೀನಾದಕ್ಕೆ ಮನಸೋತು ತನ್ನನ್ನೇ ತಾನು ಅರ್ಪಿಸಿಕೊಳ್ಳುತ್ತಾಳೆ. ಇಲ್ಲಿ ನಿಷ್ಕಲ್ಮಷ ಪ್ರೇಮದ ಸಂಕೇತವಾಗಿ ಹೆಣ್ಣಿನ ಪಾತ್ರ ಅನಾವರಣಗೊಳ್ಳುವುದನ್ನು ಗಮನಿಸಬೇಕು.

ದೂರದ ನಾವೆಯ ಏರುವೆನೆನುತ
ಏರಿದೆ ಪ್ರೇಮದ ತರಣಿಯನೊಂದ
ತೀರವು ನಿಲುಕದು, ಬಾರದು ನಾವೆ
ಹೋಗುವೆ ತೆರೆಯೊಡನೀ ಪರಿ ಸಾವೆ

ಎಂದು ತನ್ನ ತೀರದ ಆಸೆಗಾಗಿ ಹಂಬಲಿಸುತ್ತಾಳೆ. ತನಗೆ ಬಾಳಿನ ಕಡಲನ್ನು ದಾಟುವ ಆಸೆಯನ್ನು ವ್ಯಕ್ತಪಡಿಸುತ್ತಾಳೆ. ಆ ಹೆಣ್ಣಿನ ಮನದಲ್ಲಿ ಪ್ರಶ್ನೆಯಿದೆ. ಆದರೆ ಭರವಸೆ, ಜೀವನ ಪ್ರೀತಿಯಿದೆ. ಆ ಕಾರಣಕ್ಕಾಗಿಯೇ ತನ್ನ ಪ್ರೀತಿಯನ್ನು ಅರಸಿಹೊರಟಿದ್ದಾಳೆ ಎನ್ನುವುದು ಗಮನಾರ್ಹ.

ಕಥಾ ಭಾಗದ ಸನ್ನಿವೇಶ ಅಡವಿಯಲ್ಲಾದರೂ ಪಾತ್ರಧಾರಿ ನಾಯಕ ವಿರಕ್ತ ಮುನಿಯಾದರೂ, ಕವಿ ಮಾನವ ಭಾವ ಜೀವಿಯೂ ಹೌದೆಂಬ ತತ್ವದಲ್ಲಿ ಅಭಿಮತ ವಿಟ್ಟುದಾಗಿ ಕಾಣಿಸಿಕೊಳ್ಳುತ್ತದೆ. ಅದೇ ರೀತಿ ಮನುಷ್ಯ ಸಮಾಜ ಜೀವಿ ಎನ್ನುವ ತತ್ವದಲ್ಲಿ ನಂಬಿಕೆಯಿರಿಸಿ ನಿವೃತ್ತಿ ಮಾರ್ಗವನ್ನು ಪುರಸ್ಕರಿಸದೆ ಪ್ರವೃತ್ತಿ ಮಾರ್ಗವನ್ನು ಪುರಸ್ಕರಿಸಿದ್ದಾರೆ.

ಸಾವಿರ ತಪ್ಪನು ಮನ್ನಿಸು ನೀರೆ,
ಸಾವಿರ ದಪ್ಪಿದು ನಗೆಯನು ತೋರೆ !
ಪ್ರೇಮದ ನುಡಿಯಿದು ಬಿಸುಗಂಬನಿಯಲ್ಲ ;
ನೇಮದ ಮುದ್ರೆ ಇದೆನ್ನಯ ತುಟಿಯು.

ಎಂದೆನ್ನುತ್ತಾ ಮುನಿಯು ಹೆಣ್ಣಿನ ಮುಂದೆ ಆಕೆಯ ಪ್ರೀತಿಯ ಮುಂದೆ ಸೋತುಹೋಗುತ್ತಾನೆ. ನಿನ್ನ ಪ್ರೀತಿಯನ್ನು ನಾನು ನಿರಾಕರಿಸಿದ್ದು ತಪ್ಪೆಂದು ಒಪ್ಪಿಕೊಳ್ಳುತ್ತಾನೆ.

ನಮ್ಮ ಬದುಕಿನ ರೀತಿಗಳು ಸಾರ್ಥಕ ಜೀವನ ಕ್ರಮಗಳಷ್ಟೇ ನಮ್ಮನ್ನು ಕಾಯಬಹುದಾದವುಗಳು. ನಿನ್ನೆಗಳು ಕಾಡುವುದಾಗಬಾರದು. ವರ್ತಮಾನವೇ ಮುಖ್ಯವಾಗುವುದರಿಂದ ಅದೇ ಪ್ರಧಾನವಾದುದು. ಕೆಲವನ್ನು ಮರೆಯಲೇಬೇಕು ಅದು ಅನಿವಾರ್ಯವೂ ಹೌದು. ಈ ಆಶಯವನ್ನು ಧ್ವನಿಸುವ ಕಡೆಂಗೋಡ್ಲು ಶಂಕರ ಭಟ್ಟರ ಮತ್ತೊಂದು ಕಥನಕವನ "ಹೆಣ್ಣು". ಕಳೆದುಕೊಂಡ ಪ್ರಜ್ಞೆಯ

ಹುಡುಕಾಟ ಬದುಕಿನ ಒಂದು ಭಾಗ. ಅದು ವ್ಯಕ್ತಿತ್ವವನ್ನು ಕಟ್ಟುವ ಕೆಲಸವೂ ಹೌದು.

ತಾಯ್ತನವೆನ್ನುವುದು ಈ ಜಗತ್ತಿನ ಮೂಲ. ಸೃಷ್ಟಿಕ್ರಮದ ಉಗಮ, ಬೇರುಗಳೆಂದರೂ ಅದೇ. ಪ್ರಕೃತಿ ಭೂಮಿ ಎಲ್ಲದರ ವ್ಯಾಪಕತೆ ಅರಳುವುದು ಈ ಮೂಲದಿಂದಲೇ. ಆದರೆ ತಾಯ್ತನದ ವೈಭವೀಕರಣದ ಮೂಲಕ, ತಾಯಿಯಾಗಲಾರದ ಹೆಣ್ಣನ್ನು ಅವಮಾನಿಸುವ ಪರಿಪಾಠವೂ ಬೆಳೆದುದನ್ನು ನಾವು ಗಮನಿಸಬೇಕು. ಮಕ್ಕಳಿಲ್ಲದ ಗಂಡಿಗಿಂತ ಮಕ್ಕಳಿಲ್ಲದ ಹೆಣ್ಣು ಹೆಚ್ಚು ತಿರಸ್ಕಾರಕ್ಕೊಳಗಾಗುವ ಪರಿಸ್ಥಿತಿಯೂ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ನಾವು ಕಾಣುವ ವಾಸ್ತವವೇ ಆಗಿದೆ.

ಭಾರತೀಯ ಸಂಸ್ಕೃತಿಯ ಸಂದರ್ಭದಲ್ಲಿ ಸಾಮಾಜಿಕ ವ್ಯವಸ್ಥೆಯ ಪರಿಪೂರ್ಣತೆಗೆ ಕುಟುಂಬ ವ್ಯವಸ್ಥೆ ನೀಡಿರುವ ಕೊಡುಗೆ ಅಪಾರವಾದದ್ದು, ಆ ಹಿನ್ನೆಲೆಯಿಂದಲೂ ಗಂಡ ಹೆಂಡತಿ ಎನ್ನುವ ಸಂಸಾರದ ಸಂಬಂಧ ಜನ್ಮಾಂತರದ ಪರಿಕಲ್ಪನೆಗೂ ಚಾಚಿದೆ. ವಿವಾಹ ವ್ಯವಸ್ಥೆಯನ್ನು ದೈವೀಕರಿಸುವ ಪ್ರಯತ್ನ ಅನಾದಿಯಿಂದಲೂ ನಡೆದು ಬಂದಿದೆ. ಈ ಸಂಬಂಧವನ್ನು ಗೌರವಿಸುವ ಮತ್ತು ಅದು ಸಾರ್ವಕಾಲಿಕ ಶ್ರೇಷ್ಠವೆಂದು ಪ್ರತಿಪಾದಿಸುವ ಸಂಸ್ಕೃತಿಯು ನಮ್ಮದಾಗಿದೆ.

ಈ ಹಿನ್ನೆಲೆಯಲ್ಲಿ 'ಹೆಣ್ಣು' ಕಥನಕವನ ಮೂಡಿದೆ. ಪಾತಿವ್ರತ್ಯವನ್ನು ಕಾಪಾಡಿ ಕೊಳ್ಳುವುದೇ ಹೆಣ್ಣಿನ ಮುಖ್ಯಗುರಿಯಾಗಿರುತ್ತದೆ.

ಅವಳ ಹೆಸರ ಕೇಳಬೇಡ !<br>
ಊರನರಸಿ ದಣಿಯ ಬೇಡ !<br>
ಹೆಣ್ಣೆ ! ಅವಳು ಹೊತ್ತ ಹೆಸರು,<br>
ಹೆಣ್ಣೇ ಅವಳ ಹೆತ್ತ ಬಸಿರು.

ಇಲ್ಲಿ ಹೆಣ್ಣಿನ ಮೂಲ ಹೆಣ್ಣು, ಯಾರಾದರಾಗಲಿ ಆಕೆ ಹುಟ್ಟಿದ್ದು ಹೆಣ್ಣಾದರೆ ಅದೇ ಅವಳ ಸಾಧನೆಯನ್ನು ನಿರ್ಣಯಿಸುತ್ತದೆ. ಇದಕ್ಕಿಂತಲೂ ಅಧಿಕವಾಗಿ ಹೆಣ್ಣೇ ಎಂಬ ಶಬ್ದವೇ ಅವಳಿಗೆ ಬೇಲಿ.

ಆಕೆ ಕುರುಡು ಬಗೆಯ ಹಳ್ಳಿಯಲ್ಲಿ ಬೆಳಕ ಕಂಡವಳು. ದೇವರು, ಧರ್ಮ, ದಯ ಇತ್ಯಾದಿ ಬೇಡಿಗಳಿಂದ ಬಂಧಿತಳಾದವಳು.

ಈ ಕಾವ್ಯದ ವಸ್ತು ವಿಶೇಷವನ್ನು ಕವಿ ಸುಬ್ರಾಯ ಚೊಕ್ಕಾಡಿಯವರು ಗುರುತಿಸಿದ ರೀತಿ ಹೀಗಿದೆ.

"ಮುದ್ದಿನ ಮಗಳಾಗಿ, ಅಕ್ಕರೆಯ ಪತ್ನಿಯಾಗಿ ವಂಶಾಭಿವೃದ್ಧಿಯೇ ದಾಂಪತ್ಯದ ಚರಮಗುರಿಯೆಂದು ನಂಬುವ ಮೂಲಕ ಉಳಿದ ಆಮಿಷಗಳನ್ನೆಲ್ಲ ತೊರೆದ ತಾಯಿಯಾಗಿ ಬದುಕಿ, ಬದುಕಲಾಗದೆ ಸಾವನ್ನಪ್ಪಿಯೂ ಮತ್ತು ಸದ್ದಿಲ್ಲದೆ ಬದುಕುವ ಹೆಣ್ಣಿನ ವರ್ಣಮಯ ಇತಿಹಾಸದ ಚಿತ್ರಣ ಇದಾಗಿದೆ [೫].

ಅವಳ ಹೆಸರ ಕೇಳಬೇಡ ಊರಿನರಸಿ ದಣಿಯಬೇಡ ಹೆಣ್ಣೇ ಅವಳು ಹೊತ್ತ ಹೆಸರು ಎಂಬಲ್ಲಿ ಕವಿ ಆಕೆಗೆ ಹೆಸರಿಡದೆ ಇರುವ ಮೂಲಕ ಇಲ್ಲಿನ ವಸ್ತು ನಿರ್ವಹಣೆ ನಮ್ಮ ಕಾಲದ ಎಲ್ಲ ಹೆಣ್ಣಿಗೆ ಅನ್ವಯಿಸುತ್ತದೆ ಎನ್ನುವುದನ್ನು ಹೇಳಹೊರಟಂತಿದೆ.

ಹೆಣ್ಣು ಕವನದ ನಾಯಕಿಯ ಗಂಡ ಮಾರ, ತನ್ನ ಹೆಂಡತಿ ಮಗನನ್ನು ಬಿಟ್ಟು ಎರಡನೆಯ ಮಹಾಯುದ್ಧಕ್ಕೆ ಹೊರಟವನು ಮರಳುವುದೇಯಿಲ್ಲ. ಯುದ್ಧದ ವಿಷಮತೆ ಜೊತೆಗೆ ಕತ್ತು ಹಿಸುಕುವ ಕ್ಷಾಮ ಬೇರೆ. ಇಂತಹ ದಾರುಣ ಸಂದರ್ಭದಲ್ಲಿ ತರುಣವಿಧವೆಯನ್ನು ತನ್ನವಳನ್ನಾಗಿಸಹೊರಟ ಊರ ಮುಖಂಡ ತಿಮ್ಮೇಗೌಡ ಯತ್ನಿಸಿದಾಗ ಆತನನ್ನು ಪ್ರತಿಭಟಿಸಿ ಸಾವನ್ನಪ್ಪುತ್ತಾಳೆ. ಹೀಗಾಗಿ ಇದು ದುರಂತ ಕತೆಯಾಗಿ ನಿಲ್ಲುತ್ತದೆ.

ತುಂಬುಮನೆಯ ತುಳುಕುಸೊಗದ<br>
ಹಂಬಲಲ್ಲಿ ಬಳೆದಳವಳು ;<br>
'ಮಗಳೇ ! ತಾಯೇ ! ಎಂಬ ಕರೆಯ<br>
ಚಿಮುಕು ಸೊದೆಯನೀಂಟಿದವಳು ;<br>
ಕುದುರೆಯಾಗಿ ಹೊರುವ ಹೆಗಲು<br>
ತೊಟ್ಟಿಲಾಗಿ ತೊನೆವ ತೋಳು<br>
ಏರಲಿರಲು, ತೊಡೆಯ ಪೀಠ<br>
ಮನೆಯೊಳರಸು-ಕುವರಿಯವಳು.

ಈ ಕಥನಕವನದ ಇತರ ಭಾಗಗಳಲ್ಲೂ ಹೆಣ್ಣೊಬ್ಬಳ ಅಂತರಂಗ ಸುಂದರವಾಗಿ ವರ್ಣಿತವಾಗಿದೆ. ಇದರೊಂದಿಗೆ ಸ್ತ್ರೀಯ ಅಂತರಾಳದ ನೋವು, ದುಗುಡ ದುಮ್ಮಾನಗಳು, ಸಶಕ್ತವಾಗಿ ವ್ಯಕ್ತವಾಗಿದೆ. ಕವಿತೆಯ ನಿರೂಪಣೆ ಸೊಗಸಾಗಿದೆ. ಅತಿ ಸಾಂಕೇತಿಕತೆಯ ಭಾರ ಕವಿತೆಗಿಲ್ಲ. ಹೀಗಾಗಿ ಸರಳ ನಿರೂಪಣೆಯ ಈ ಕವಿತೆ ಹೆಣ್ಣಿನ ಅಂತರಂಗವನ್ನು ಅಭಿವ್ಯಕ್ತಿಸುವಲ್ಲಿ ಯಶಸ್ವಿಯಾಗಿದೆ.

ಯುದ್ಧದಲ್ಲಿ ವೀರ ಮರಣವನ್ನು ಪಡೆದ ಮಾರನ ಪತ್ನಿಯನ್ನು ಊರ ತಿಮ್ಮೆ ಗೌಡ ತನ್ನವಳನ್ನಾಗಿಸಲು ಯತ್ನಿಸಿದಾಗ

ಹಲವು ಬಾರಿ ಪಾಕಗೊಂಡ<br>
ಹಳೆಯ ಮಾತು ; ಹಳಸು ತುತ್ತು !<br>
ತಿಮ್ಮಗೌಡ ತೊಳಸಿ ತೋಡಿ<br>
ಬಡಿಸುತಿರಲು ಹೊಲದ ನಾರಿ<br>
"ಎಮ್ಮಗೊಳನೆಮಗೆ ಬಿಡಿರಿ<br>
ಕಣ್ಣ ನೀರ ತೊಡೆದು ಬಿಡಿರಿ<br>
ಎನುತೆ ದಾರಿ ತೋರಿಸಿದಳು

ತನ್ನ ತಾನೆ ಎಬ್ಬಿಸಿದಳು"

ಎಂಬಲ್ಲಿ ಪಾತ್ರಗಳ ಅಂತರಂಗದ ಸಂಘರ್ಷವಿದೆ. ಅಬಲೆ ಹೆಣ್ಣನ್ನು ಸಮಾಜದಲ್ಲಿ ಹೇಗೆ ನೋಡಲಾಗುತ್ತದೆ ಎಂಬುದನ್ನು ಈ ಕವಿತೆಯು ಸಶಕ್ತವಾಗಿ ಹೇಳುತ್ತದೆ. ಇಲ್ಲಿ ವಿಷಾದವಿದೆ. ಹೆಣ್ಣಿಗೆ ಒಂಟಿಯಾಗಿ ಜೀವಿಸಲು ಅವಕಾಶವಿಲ್ಲದಿದ್ದುದರ ಬಗ್ಗೆ ಖೇದವಿದೆ. ಹೆಣ್ಣಿನ ಪರತಂತ್ರ್ಯ ಪರಿಸ್ಥಿತಿಯ ಬಗ್ಗೆ ಈ ಕಥನಕವನ ಸಶಕ್ತವಾದ ಅಭಿಪ್ರಾಯ ಮೂಡಿಸಿದೆ.

ಕಾವ್ಯದ ಕೊನೆಯಲ್ಲಿ ತುಂಬ ಸಾಂಕೇತಿಕವಾದ ಮಾತನ್ನು ಕವಿ ಆಡುತ್ತಾರೆ. ಕಥಾನಾಯಕಿಯ ದುರಂತಾಂತವನ್ನು ಮೆಟ್ಟಿ ಹಾಡುವ ಕವಿ ತನ್ನ ನಿಲುಮೆಯನ್ನು ಪ್ರತಿಭಟಿಸಿ ಹೊಸತಿಳಿವನ್ನು ನೀಡುತ್ತಾರೆ. ಇಲ್ಲಿನ ವ್ಯಂಗ್ಯ ವೈಭವೀಕರಣಕ್ಕೆ ಅವರೊಡ್ಡುವ ತಡೆ ಗಮನಿಸಬೇಕಾದದ್ದು.

ಎಂದು ಬಣ್ಣ ಬಣ್ಣನೆಯಲಿ
ಬರೆದೆ ಕವಿಯೆ ; ಸುಮ್ಮನಾಗು !
ಸಾಕು ನಿನ್ನ ಸರಸ ಮಿಥ್ಯ
ಕಾಣದಿಹುದೆ ವಿರಹ ಸತ್ಯ ?
ಹಿಂದಿನಂತೆ ಸಕಲಬಹುದು
ದೇವರೊಲುಮೆ ಪೂರ್ಣವಹುದು
ಇರುಳು ಹಗಲ ಕೂಡು ಕಟ್ಟು
ಚಂದವಾಗಿ ಹೊಂದುತಿಹುದು

ಇಲ್ಲಿ ಬದುಕಿನ ವಾಸ್ತವವನ್ನು ಹೇಳುವ, ವ್ಯಂಗ್ಯವನ್ನು ಗುರುತಿಸುವ ಬಗೆಯನ್ನು ಗಮನಿಸಬೇಕು. ಈ ಕಥನಕವನದಲ್ಲಿ ಜೀವತೆತ್ತ ಹೆಣ್ಣಿನ ಕಥೆಯೊಂದೇ ಅಲ್ಲ. ನಮ್ಮ ಸುತ್ತ ಇಂತಹ ಕ್ರೂರ ವಾತಾವರಣದಲ್ಲಿ ಬದುಕಲಾರದೆ ಜೀವತೆತ್ತ ಅನಾಮಿಕ ಹೆಣ್ಣುಗಳೆಷ್ಟಿರಬಹುದು ಎನ್ನುವ ಕಟುವಾಸ್ತವವನ್ನು ಕವಿ ಬಯಲುಗೊಳಿಸುತ್ತಿದ್ದಾರೆ.

ಹೀಗೆ ಈ ಕಥನಕವನದಲ್ಲಿ, ವ್ಯವಸ್ಥೆಯೊಳಗಡೆ ಹೆಣ್ಣು ಅನುಭವಿಸುವ ಕಷ್ಟಗಳು ಸೂಕ್ಷ್ಮವಾಗಿ ಚಿತ್ರಿತವಾಗಿದೆ. ಆದರೆ, ದಾಂಪತ್ಯದಲ್ಲಿ, ವಂಶಾಭಿವೃದ್ಧಿಯಲ್ಲಿ, ಹೆಣ್ಣು ಹೀಗೆಯೇ ಇರಬೇಕೆಂಬ ಸಾಂಪ್ರದಾಯಿಕ ಮೌಲ್ಯಗಳು ಸೂಕ್ಷ್ಮವಾಗಿ ಬಿಂಬಿತವಾಗಿವೆ.

ಕಡೆಂಗೋಡ್ಲು ಅವರ ಇನ್ನೊಂದು ಕಥನಕವನ 'ಭೂತಾಳ ಪಾಂಡ್ಯ'. ಈ ಕಥನಕವನವು ಪರಂಪರೆಯನ್ನು ಕುರಿತಂತೆ ಇದೆ. ಇದರಲ್ಲೂ ಕೂಡಾ ಸ್ತ್ರೀತ್ವದ ಶೋಧನೆಯೇ ಮುಖ್ಯವಾಗಿದೆ. ದೇವಪಾಂಡ್ಯನ ಸೋದರಿ ಕೇವಲ ಕಥೆಯ ಭಾಗವಾಗದೆ ಸಮಗ್ರ ಸ್ತ್ರೀತ್ವದ ಪ್ರತೀಕವಾಗಿದ್ದಾಳೆ. ಸಂಕಟವನ್ನು ಮೀರಿ ಬೆಳೆದ ಶಕ್ತಿ ಈ ಹೆಣ್ಣು. ಕಥನಕವನದ ತುಂಬಾ ಸ್ತ್ರೀಪರವಾದ ಧ್ವನಿಯು ಅಭಿವ್ಯಕ್ತವಾಗಿದೆ.

ಹೆಣ್ಣಿನ ಅನನ್ಯತೆಯನ್ನು ವಿಶಿಷ್ಟಮಾದರಿಯಲ್ಲಿ ತೆರೆದಿರುವ ಭೂತಾಳಪಾಂಡ್ಯನ ಕಥೆಯೇ ಪಶ್ಚಿಮ ಕರಾವಳಿಯಲ್ಲಿ ಪ್ರಚಲಿತವಿರುವ ಮಾತೃರೂಪಿ ಸಂಸ್ಕೃತಿಗೆ ಆಧಾರ.

ಸಮುದ್ರವ್ಯಾಪಾರಕ್ಕೆಂದು ದೇವಪಾಂಡ್ಯ, ಭೂತಾಳಪಾಂಡ್ಯ ನಿರ್ಮಿಸಿದ ಹೊಸ ಹಡಗನ್ನು ಕಡಲಿಗಿಳಿಸುವ ಸಂದರ್ಭ 'ಕುಂಡೋದರ' ಎಂಬ ಭೂತ ಕಾಣಿಸಿಕೊಂಡು ನರಬಲಿ ಬೇಡುತ್ತದೆ. ಇಲ್ಲವಾದರೆ ಹಡಗನ್ನು ನಾಶಪಡಿಸುವುದಾಗಿ ಬೆದರಿಸುತ್ತದೆ.

ಈ ಸನ್ನಿವೇಶದಲ್ಲಿ ಅರಸ ತನ್ನ ಏಳುಮಂದಿ ಮಕ್ಕಳಲ್ಲಿ ಒಬ್ಬನನ್ನು ಬಲಿಕೊಡುವಂತೆ ಪತ್ನಿಯನ್ನು ಕೇಳುತ್ತಾನೆ.

ಹೇಳು ಶಿವೇ ! ನಿನ್ನ ನಲ್ಮೆಯ ನಲ್ಲನಿಗೆ ತೋರ್ಪ

ದಾರಿಯಾವುದು ಹೇಳು ! ಎಂದು ತನ್ನ ಸಂಕಟವನ್ನು ಅರಸ ಪತ್ನಿಯಲ್ಲಿ ಹೇಳಿದಾಗ

ಬೆಂದಳಾ ಬಡಹೆಣ್ಣು ಮೊಗದಿ ಹೊಗೆ ಹೊಡೆಯಿತ್ತು
ಅವಳ ಮನವೆಂಬುರೀವ ಆಸೆಗೊಳಿಗೆ ತತ್ವ
ಶೀತಜಲವೆರಚಿದಂತಾಯ್ತು.
ನಿರಾಕರಿಸಿದ ಅವಳು ತವರು ಮನೆಗೆ ತೆರಳುತ್ತಾಳೆ.
ನಲ್ಮೆಯ ಸಾಮ್ರಾಜ್ಯಕ್ಕೆ ಲಗ್ಗೆ ಹೊಡೆಯುತೆ ಬಹುದು ;
ಹೆಣ್ಣಬಾಳ ಗೋಳು ;

ದೇವಪಾಂಡ್ಯನ ಸಾವಿನ ಮೀಮಾಂಸೆ ಆತನ ಪತ್ನಿಗೆ ಅರ್ಥವಿಲ್ಲದ ಶಬ್ದಜಾಲಗಳಾದವು. ಭಾವವನ್ನು ಮುಚ್ಚಿಡುವ ಅಲಂಕಾರ ರಚನೆಗಳ ರೀವಿಯಾಗಿ ಕಾಣಿಸಿತು. ಲಂಚಗುಳಿ ಜೋಯಿಸರ ಮಾತ ಕಿವಿಯಲ್ಲಿ ಹಾಕಿ ನಾವೂ ಮರುಳಾಗುವುದೆ ? ಎಂದು ಎದುರು ಪ್ರಶ್ನೆ ಎಸೆಯುವಳು.

ಈ ಸನ್ನಿವೇಶದಲ್ಲಿ ಆಕೆ ತನಗಿರುವ ಅಧಿಕಾರದ ಬಲದಿಂದ ತನಗಾಗುವ ಅನ್ಯಾಯವನ್ನು ಶೋಷಣೆಯನ್ನು ಪ್ರತಿಭಟಿಸುತ್ತಾಳೆ ಎನ್ನುವುದು ಗಮನಾರ್ಹ.

ದೇವ ಪಾಂಡ್ಯನ ತಂಗಿ ಸತ್ಯವತಿ ಸಂಪ್ರದಾಯವನ್ನು ಪಾಲಿಸುವ ಹೆಣ್ಣಾಗಿ ಕಥನಕವನದಲ್ಲಿ ರೂಪವೆತ್ತಿದ್ದಾಳೆ. ಅಣ್ಣ ಪಾಂಡ್ಯನ ಅಳಿವಿಗೆ ಕಳವಳಿಸಿದ ಸತ್ಯವತಿ ಅಣ್ಣನ ಬದಲು ಬೇರೊಂದು ಬಲಿಯ ಕೊಡಬೇಕು.

ಅಳಿವರಳಿಯಲುಬೇಕು. ಉಳಿವರುಳಿಯಲುಬೇಕು ಎಂಬ ನಿರ್ಧಾರ ಅವಳದು. ತನ್ನ ಮಗ ಜಯನನ್ನು ಕರೆದು ಮಾವನ ಬದಲು "ನೀನೊಬ್ಬನಳಿದು ಲೋಕವನು ಬದುಕಿಸು ಮಗನೆ ಎಂದು ಕಣ್ಣೀರ್ಗರೆದು ಹೇಳುತ್ತಾಳೆ.

ಧನ್ಯವಾಯಿತು ಹುಟ್ಟುಸಾವಿನಲಿ ಎಂಬ ಸಾವಿನ ಸಾರ್ಥಕ್ಯವನ್ನು ಅಣ್ಣನ ಔದಾರ್ಯವನ್ನು ಮಗನಿಗೆ ಬಗೆಬಗೆಯಾಗಿ ತಿಳಿಸುತ್ತಾಳೆ. ಮಗನೆ ಪಡೆನುಡಿಗೊಡದೆ

ನಡೆ, ಮೃತ್ಯುವಿನ ಕೈಯ ಹಿಡಿದು ಬಂದಿರುವ ಕರ್ತವ್ಯಕ್ಕೆ ಕೈಯಕೊಡು ಎಂದು ಮಗನಿಗೆ ಹೇಳುತ್ತಾಳೆ.

ಕುಂಡೋದರನ ಸೇವೆಗಾಗಿ ಮಗನನ್ನು ಅರ್ಪಿಸುತ್ತಾಳೆ. ತುಳುನಾಡಿನ ಇತಿಹಾಸದಲ್ಲಿ ಅಮರಳಾಗುತ್ತಾಳೆ.

ಈ ಕಥನಕವನದಲ್ಲಿ ಸತ್ಯವತಿಯ ತಾಯ್ತನದ ಪ್ರೀತಿ ಪ್ರೇಮ ಮನೆಯೊಳಗೆ ಸೀಮಿತವಾಗದೆ, ತ್ಯಾಗದ ಪರಾಕಾಷ್ಠೆಗೆ ಏರುತ್ತದೆ. ಅವಳ ತ್ಯಾಗದಿಂದಲೇ ಪಿತೃ ಪ್ರಧಾನ ಸಂಸ್ಕೃತಿ ಮಾತೃ ಪ್ರಧಾನ ಸಂಸ್ಕೃತಿಯತ್ತ ಹೊರಳುತ್ತದೆ. ಎಲ್ಲಾ ನಾಗರಿಕತೆಗಳಲ್ಲೂ ಕೂಡ ಹೆಣ್ಣಿನ ಬಗ್ಗೆ ಹೀನಾಯ ಕಲ್ಪನೆ ಅಥವಾ ಎರಡನೇ ದರ್ಜೆಯ ವ್ಯಕ್ತಿಯಾಗಿ ಕಾಣುವ ಹೆಣ್ಣು ತನ್ನ ತ್ಯಾಗದಿಂದ ಸಾಮಾಜಿಕ ವ್ಯವಸ್ಥೆಯನ್ನೇ ಬದಲಾಯಿಸಿದ್ದು ಗಮನಾರ್ಹ.

**ಟಿಪ್ಪಣಿಗಳು :-**

೧. ಸತ್ಯನಾರಾಯಣ ಮಲ್ಲಿಪಟ್ಟಣ ಪುಟ ೨೯, ದಕ್ಷಿಣ ಕನ್ನಡದ ಕಾವ್ಯ ಮತ್ತು ಪ್ರಾದೇಶಿಕತೆ ಪ್ರಸಾರಾಂಗ – ಮಂಗಳೂರು ವಿಶ್ವವಿದ್ಯಾನಿಲಯ , ೧೯೯೯
೨. ಪ್ರಭುಶಂಕರ ಪುಟ – ೧೧೪, ಕೃತಿಶೀಲ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ ಹಂಪಿ ೨೦೦೭
೩. ವಾಙ್ಮಯ ತಪಸ್ವಿ ಪುಟ ೧೭೧, ಸಂಪಾದಕರು – ನಾವಡ ಎ.ವಿ. ಕಡೆಂಗೋಡ್ಲು ಶಂಕರ ಭಟ್ಟ ಸ್ಮಾರಕ ಗ್ರಂಥ ಪ್ರಕಾಶಕರು – ಡಿ.ವಿ.ಕೆ ಮೂರ್ತಿ ಕೃಷ್ಣಮೂರ್ತಿಪುರಂ, ಮೈಸೂರು ೧೯೭೭
೪. ನಾವಡ ಎ.ವಿ. ಪುಟ ೧೭, ನವೋದಯದ ಕೋಗಿಲೆ ಕಡೆಂಗೋಡ್ಲು ಶಂಕರ ಭಟ್ಟ ಪ್ರ. ಕನ್ನಡ ಸಂಘ ಕಾಂತಾವರ ೨೦೧೨
೫. ಸುಬ್ರಾಯ ಚೊಕ್ಕಾಡಿ ವಾಙ್ಮಯ ತಪಸ್ವಿ ಕಡೆಂಗೋಡ್ಲು ಶಂಕರ ಭಟ್ಟ ಅಭಿನಂದನಾ ಪುಟ ೧೭೯, ಗ್ರಂಥ ಸಂಪಾದಕರು – ನಾವಡ ಎ.ವಿ. ಡಿ.ವಿ.ಕೆ ಮೂರ್ತಿ, ಮೈಸೂರು ೧೯೭೭

# ಅಧ್ಯಾಯ – ೪

## ಕಡೆಂಗೋಡ್ಲು ಕಥನಕವನಗಳಲ್ಲಿ ಮೌಲ್ಯಗಳ ವಿವೇಚನೆ

ಮೌಲ್ಯಗಳೆಂದರೆ ನೈತಿಕವಾದವುಗಳು. ಬೆಲೆಯುಳ್ಳದ್ದು. ಬದುಕನ್ನು ಸಾರ್ಥಕತೆಗೆ ಒಯ್ಯಲು ಮೌಲ್ಯಗಳು ಅಗತ್ಯ. ಮೌಲ್ಯಗಳು ಮಾನವೀಯ ಪರವಾಗಿವೆ.

ಅನಂತಕೋಟಿ ಜೀವರಾಶಿಗಳಲ್ಲಿ ಮಾನವನು ತನ್ನ ಚಿಂತನಾ ಸಾಮರ್ಥ್ಯದಿಂದ ಎಲ್ಲಾ ಪ್ರಾಣಿಗಳಿಗಿಂಡ ಭಿನ್ನನಾಗಿದ್ದಾನೆ. ಅವನಿಗೆ ಇತರ ಯಾವುದೇ ಪ್ರಾಣಿಗಳಿಗಿಲ್ಲದಂತಹ ವಿಶಿಷ್ಟವಾದ ಬುದ್ಧಿಶಕ್ತಿಯಿದೆ. ಈ ಬುದ್ಧಿಭಾವದಿಂದ ಅವನಲ್ಲಿ ವಿಚಾರವಿದೆ, ವಿವೇಕವಿದೆ. ಕಲ್ಪನೆಗಳ ಪರಿಜ್ಞಾನವಿದೆ. ನಡೆನುಡಿಗಳ ಸಂಸ್ಕಾರವಿದೆ. ಈ ಎಲ್ಲಾ ಗುಣ ವಿಶೇಷಗಳು ಮಾನವ ತನ್ನ ಜೀವನದ ಉನ್ನತಿಗೆ ರೂಪಿಸಿಕೊಂಡು ಬಂದ ಅನುಭವದ ಸತ್ಯವಾಗಿದೆ.

ಸದ್ಗುಣಗಳು ಲೋಕಹಿತ ಸಾಧನೆಗೆ ಪೂರಕವಾದ ಸಕಲ ಜೀವಾತ್ಮರಿಗೆ ಲೇಸನ್ನು ಬಯಸುವ ಘನವಾದ ಶ್ರೇಷ್ಟವಾದ ಅನುಪಮವಾದ ಅಮೂಲ್ಯವಾದ ಮೌಲ್ಯಗಳಾಗಿವೆ.

ಈ ಮೌಲ್ಯಗಳು ಬದುಕಿನ ಬಹುತೇಕ ಒಳಿತನ್ನು ಗುರಿಯಾಗಿಸಿಕೊಂಡು ನಿರ್ಧರಿಸಿದ ನೀತಿ ನಿಕ್ಷೇಪಗಳು, ಸಾಮಾಜಿಕ ಸುಖ–ಶಾಂತಿ ಸುವ್ಯವಸ್ಥೆಯ ಇರುವಿಕೆಗೆ ಕಾರಣವಾಗುವ ನೈತಿಕ ನೆಲೆಗಟ್ಟುಗಳು.

ಮೌಲ್ಯಗಳು ಸಮಗ್ರ ಸಮಾಜಕ್ಕೆ ಬೇಕಾದವುಗಳು. ಆದುದರಿಂದ ಮೌಲ್ಯಗಳು ಸಾರ್ವತ್ರಿಕ ಹಾಗೂ ಸಾಮಾಜಿಕ ಸ್ವಾಸ್ಥಕ್ಕಾಗಿ ರೂಪು ತಳೆದಿದೆ.

ಮೌಲ್ಯಗಳು ಮಾನವ ಜಗತ್ತಿಗೆ ಅನ್ವಯಿಸುವ ಅಮೂಲ್ಯ ತತ್ವಗಳು. ಸಕಲ ಜೀವಿಗಳಿಗೆ ಲೇಸನ್ನು ಬಯಸುವ ಇವು ಆಯಾ ಸಮಾಜದ ಸಂಸ್ಕೃತಿ ವಿಶೇಷಗಳು. ಮೌಲ್ಯಗಳನ್ನು ಬದುಕಿನಲ್ಲಿ ಅಳವಡಿಸಿ ಬದುಕುವುದೇ ಜೀವನ ಸಾರ್ಥಕ್ಯ.

ಮೌಲ್ಯಗಳನ್ನು ವೈಯಕ್ತಿಕ, ಕೌಟುಂಬಿಕ, ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಮೌಲ್ಯಗಳೆಂದು ವಿಭಜಿಸಿದರೂ ಅವೆಲ್ಲ ಸಮಾಜದ ಹಿತದೃಷ್ಟಿಯಿಂದ ನಿರ್ಧರಿಸಿದವುಗಳು. ಸಮಾಜದ ಒಳಿತಿಗಾಗಿ ಮೌಲ್ಯಗಳ ಬಳಕೆ ಮಹತ್ವದ್ದಾಗಿದೆ. ಮೌಲ್ಯಗಳು ಹೃದಯ ಶ್ರೀಮಂತಿಕೆಯ ಪ್ರತೀಕಗಳು ಹೌದು. ಲೋಕೋಪಕಾರಕ ಸಾಧಕಗಳನ್ನು ಜನರು ಮೌಲ್ಯಗಳೆಂದು ನಂಬಿದ್ದಾರೆ. ಮೌಲ್ಯಗಳ ವಿವೇಚನೆಯ ಸಂದರ್ಭದಲ್ಲಿ ವ್ಯಕ್ತಿಯ ವಯಕ್ತಿಕ ಆಸೆ ಆಕಾಂಕ್ಷೆಗಳಿಗೆ ನೆಲೆಯಿಲ್ಲ. ಸಮಷ್ಟಿ ಹಿತಕ್ಕಾಗಿ ವ್ಯಕ್ತಿ ತನ್ನತನವನ್ನು ಬದಿಗೊತ್ತಿ ನಿಲ್ಲಬೇಕಾಗುತ್ತದೆ. ಇದರಿಂದ ಜೀವಕೋಟಿಗೆ ಒಳ್ಳೆಯದಾಗುತ್ತದೆ ಎಂಬ ಆಶಯವೇ ಮೌಲ್ಯಗಳ ತಿರುಳಾಗುತ್ತದೆ.

ಮೌಲ್ಯಗಳ ಕಲ್ಪನೆಯಲ್ಲಿ ಕಾಲದಿಂದ ಕಾಲಕ್ಕೆ ಬದಲಾವಣೆಗಳೂ ಆಗಿವೆ. ಒಂದುಕಾಲಕ್ಕೆ ನಿಜವಾದ ಮಾನವೀಯ ಗುಣ, ಅನುಸರಿಸಬೇಕಾದ –

ಅನುಕರಿಸಬೇಕಾದ ಅನೇಕ ಮೌಲ್ಯಗಳು ಕಾಲದ ಸ್ಥಿತ್ಯಂತರದಲ್ಲಿ ಬದಲಾವಣೆಗೊಂಡಿದೆ. ಈ ಮೌಲ್ಯಗಳು ಬದುಕಿಗೆ ಬೇಕಾದವುಗಳು. ಮೌಲ್ಯಗಳನ್ನು ಬಾಳಿನಲ್ಲಿ ಅಳವಡಿಸಿಕೊಂಡು, ಅನುಸರಿಸಿಕೊಂಡು ಹೋದವರು ಮಾತ್ರ ಮೌಲ್ಯಾಧಾರಿತ ಮಾನವರೆಂದು ಗೌರವಿಸಲ್ಪಡುತ್ತಾರೆ.

ಮೌಲ್ಯಗಳು ಸಮುದಾಯಕ್ಕೆ ನಿರ್ದಿಷ್ಟವಾಗಿರುತ್ತವೆ. ಚರಿತ್ರೆಗೆ ಬದ್ಧವಾಗಿರುತ್ತವೆ. ಆದುದರಿಂದಲೇ ವ್ಯವಸ್ಥೆಗೆ ಸ್ಪಂದಿಸಿ ಬದಲಾಗುತ್ತ ಇರುತ್ತವೆ. ಈ ಮೌಲ್ಯಗಳು ಸಾರ್ವಕಾಲಿಕವಲ್ಲದಿದ್ದರೂ ಆಯಾ ಕಾಲಘಟ್ಟದಲ್ಲಿ ಮಾತ್ರ ಜನರನ್ನು ನಿರ್ದೇಶಿಸಿದ ನೀತಿ ಸೂತ್ರಗಳೇ ಹೌದು.

ನಮ್ಮ ಸಂಸ್ಕೃತಿಯಲ್ಲಿ ಮೌಲ್ಯಗಳು ಬಹು ಆಯಾಮದ ಹಿನ್ನೆಲೆಯಿಂದ ಹುಟ್ಟಿಕೊಂಡವುಗಳು. ಆದುದರಿಂದಲೇ ನಮ್ಮ ಮೌಲ್ಯಗಳು ಕಳೆಗಟ್ಟಿವೆ. ಮೌಲ್ಯಗಳಲ್ಲಿ ಮನುಷ್ಯನ ಅನುಭವಕ್ಕೆ ನಿಲುಕುವ ಅಂಶಗಳಿರುತ್ತವೆ. ಆದುದರಿಂದಲೇ ಅವು ಬದುಕನ್ನು ಪ್ರತಿಫಲಿಸುತ್ತದೆ.

ವ್ಯಕ್ತಿ ಸಾರ್ಥಕತೆಯ ಬಾಳನ್ನು ಬಾಳಿದರೆ ಜೀವನ ಸಾಫಲ್ಯ ಒದಗುವುದು. ಮಾನವ ಜನ್ಮ ಪಡೆದರೆ ಮಾತ್ರ ಸಾಲದು, ಅದಕ್ಕಾಗಿ ರಾಕ್ಷಸೀಯ ಪ್ರವೃತ್ತಿಗಳನ್ನು ಬಿಟ್ಟು ಮಾನವೀಯ ಗುಣಗಳನ್ನು ಬೆಳೆಸಿಕೊಳ್ಳಬೇಕಾಗುತ್ತದೆ. ಮಾನವೀಯ ಗುಣಗಳೇ ಮೌಲ್ಯಗಳು.

ಮೌಲ್ಯಗಳಿಲ್ಲದ ಬದುಕು ಬದುಕೇ ಅಲ್ಲ. ಮಾನವನ ವ್ಯಕ್ತಿತ್ವಕ್ಕೆ ರೂಪುಕೊಡುವ ಕ್ರಿಯಾಕಲ್ಪನೆಗಳೇ ಮೌಲ್ಯಗಳು ಅದೇ ರೀತಿ ಸಾಹಿತ್ಯ ಕೃತಿಗಳೂ ಕೂಡಾ ಒಂದಲ್ಲ ಒಂದು ವಿಧದಿಂದ ಸಮಾಜ–ಸಂಸ್ಕೃತಿ ಒಪ್ಪಿಕೊಂಡ ಮೌಲ್ಯಗಳನ್ನು ಪ್ರತಿನಿಧಿಸುತ್ತದೆ.

ಅನಂತವಾದ ಸಾಹಿತ್ಯ ಪ್ರಪಂಚದಲ್ಲಿ ವೈರುಧ್ಯ ವೈವಿಧ್ಯತೆಗಳಿಂದ ಕೂಡಿದ ಅನೇಕ ಕೃತಿಗಳು ರಚನೆಗೊಂಡಿವೆ. ಆದರೆ ಅವೆಲ್ಲವೂ ಕೂಡಾ ಮಹತ್ವವೆನಿಸುವುದು ಅವು ಬಿಂಬಿಸುವ ಮೌಲ್ಯಗಳಿಂದ ಮಾತ್ರ.

ಮೌಲ್ಯಗಳು ಬದುಕಿನ ಆರಂಭದಿಂದ ಅಂತ್ಯದವರೆಗೂ ಬೆಳೆಯುತ್ತಾ ಸಾಗಿ ಜೀವನದ ರೂಪರೇಷೆಗಳನ್ನು ತಿದ್ದಿ ತೀಡಿ ನಮ್ಮನ್ನು ಸಂಸ್ಕಾರವಂತರನ್ನಾಗಿ ಮಾಡಿ, ವಿಚಾರವಂತರನ್ನಾಗಿ ಮಾಡುವ ಅಮೂಲ್ಯ ತಾತ್ವಿಕ ಅಂಶಗಳು.

ಮೌಲ್ಯಗಳಿಲ್ಲದ ಸಾಹಿತ್ಯ ಕೃತಿಗಳೇ ಇಲ್ಲವೆಂದರೆ ತಪ್ಪಾಗಲಾರದು. ಪ್ರತಿಯೊಂದು ಕೃತಿಯೂ ತನ್ನದೇ ಆದ ಮೌಲ್ಯಗಳನ್ನು ಪ್ರತಿಪಾದಿಸುತ್ತದೆ.

ಮೌಲ್ಯದ ಪರಿಕಲ್ಪನೆ ಮಾನವ ಕಾರ್ಯ ಚಟುವಟಿಕೆಗಳಲ್ಲಿ ಹಾಗೂ ಅವನ ಆಲೋಚನೆಗಳಲ್ಲಿ ಹಾಸುಹೊಕ್ಕಾಗಿರುತ್ತದೆ. ವ್ಯಕ್ತಿಯ ಆಲೋಚನೆಗಳನ್ನು ನಿರ್ದೇಶಿಸುವ ಹಾಗೂ ನಿಯಂತ್ರಿಸುವ ತತ್ವವಿಚಾರಗಳನ್ನು ಮೌಲ್ಯಗಳೆಂದು ಕರೆಯಬಹುದು.

ಕಡೆಂಗೋಡ್ಲು ಶಂಕರ ಭಟ್ಟರ ಕಥನಕವನಗಳನ್ನು ಅವಲೋಕಿಸಿದಾಗ ಪ್ರತಿಯೊಮದು ಕಥನಕವನವೂ ಮೌಲ್ಯ ಉಳ್ಳದ್ದೇ ಆಗಿದೆ. ಪ್ರತಿಯೊಂದು ಪಾತ್ರವೂ ಕೂಡಾ ಮೌಲ್ಯಗಳನ್ನು ಧ್ವನಿಸುತ್ತದೆ.

ಅಧ್ಯಯನದ ದೃಷ್ಟಿಯಿಂದ ಕಥನಕವನಗಳಲ್ಲಿ ಅಡಕವಾದ ಮೌಲ್ಯಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

೧) ವ್ಯಕ್ತಿಗತ ಮೌಲ್ಯಗಳು

೨) ಕೌಟುಂಬಿಕ ಮೌಲ್ಯಗಳು

೩) ಸಾಮಾಜಿಕ ಮೌಲ್ಯಗಳು

೪) ಧಾರ್ಮಿಕ ಮೌಲ್ಯಗಳು

**ವ್ಯಕ್ತಿಗತ ಮೌಲ್ಯಗಳು :**

ಎಲ್ಲಾ ಕಥನಕವನಗಳ ಪಾತ್ರಪೋಷಣೆಯಲ್ಲೂ ವ್ಯಕ್ತಿಗತ ಮೌಲ್ಯಗಳು ಪ್ರಮುಖ ಪಾತ್ರವಹಿಸುತ್ತದೆ. ಒಬ್ಬ ಸೃಜನಶೀಲಕವಿ ಮಹತ್ವಗಳನ್ನು ಯಾವುದೇ ನಿರ್ದಿಷ್ಟ ವಸ್ತುವಿನ ಸಂದರ್ಭಕ್ಕೆ ದಾಖಲಿಸಿಕೊಂಡರೂ, ತನ್ನ ಸುತ್ತಮುತ್ತಲಿನ ಸಮಾಜ, ಜನಜೀವನ ಇತ್ಯಾದಿಗಳ ಪ್ರಭಾವದಿಂದಾಚೆಗೆ ಪಾರಾದಂತೆ ನಿಂತು ಚಿತ್ರಿಸುವುದು ಸಾಧ್ಯವಾಗುವುದಿಲ್ಲ.

ಮೂಲತಃ ಕಡೆಂಗೋಡ್ಲು ಶಂಕರ ಭಟ್ಟರು ತಮ್ಮ ಕಾವ್ಯ ಚಿಂತನೆಗಳ ಕಾರಣದಿಂದ ಬದುಕಿನ ಕವಿ ಎನಿಸಿಕೊಳ್ಳಬಲ್ಲವರು. ಅವರ ಬಹುಪಾಲು ಕವಿತೆಗಳಲ್ಲಿ ಯಾವುದೇ ವಸ್ತು ವಿಷಯದ ಹುಡುಕಾಟಕ್ಕೆ ತೊಡಗಿದರೂ ಅದು ಮಾನವ ಜೀವನ ಮತ್ತು ಅಲ್ಲಿ ಲಭ್ಯವಾಗಬಹುದಾದ ಮಹತ್ವಗಳನ್ನು ಕುರಿತೇ ಚಿಂತಿಸುತ್ತದೆ.

ಹೊನ್ನಿಯ ಮದುವೆ, ಮಾದ್ರಿ ಚಿತೆ, ಮುರಲೀ ನಾದ, ಹೆಣ್ಣು, ಭೂತಾಳ ಪಾಂಡ್ಯ ಮೊದಲಾದ ಕಥನಕವನಗಳು ಸ್ತ್ರೀಪರವಾದ ನಿಲುವುಗಳೊಂದಿಗೆ ಅವಳನ್ನು ಶೋಷಿಸುವ ವ್ಯವಸ್ಥೆಯನ್ನು ಕುರಿತು ಗಂಭೀರವಾಗಿಯೇ ವಿಡಂಬಿಸುತ್ತಾರೆ. ಮಾನವೀಯವಾದ ಅಂತಃಕರಣವೇ ಪ್ರಧಾನವಾಗಿರುವುದರಿಂದ ಯಾವುದೇ ಸಂಪ್ರದಾಯವಾದಿ ನಿಲುವಿನ ಪೂರ್ವಗ್ರಹವೂ ಕವಿಯನ್ನು ಕಾಡುವುದಿಲ್ಲ.

ಕಥನ ಕವನದ ಪಾತ್ರಗಳೆಲ್ಲವೂ ಮನುಷ್ಯ ಸಂಬಂಧಗಳ ಮೌಲ್ಯದ ಹರಿಕಾರರಾಗಿಯೂ ಬದುಕುವ ಸಾರ್ಥಕ ಪರಿಯನ್ನು ತನ್ಮೂಲಕ ಸಾಮಾಜಿಕಕ ಸಂಬಂಧಗಳು ಬೆಳಗುವ ಶ್ರೇಷ್ಠತೆಯನ್ನು ಕವಿ ಚಿತ್ರಿಸಿದ್ದಾರೆ. ಆ ಮೂಲಕ ನಾಗರಿಕತೆಯ ಯಾಂತ್ರಿಕ ಜಗತ್ತಿನಲ್ಲಿ ನಾವು ಮನುಷ್ಯತ್ವದ ಮಹತ್ವಗಳನ್ನು ಕಳೆದುಕೊಳ್ಳುತ್ತಿರುವುದರ ಅವಿಯಗಳನ್ನು ಕಥನಕವನದ ಪಾತ್ರಗಳು ಧ್ವನಿಸುತ್ತವೆ.

ದೇಶದ ಸಮಸ್ಯೆಗಳಾದ ಬಡತನ ದಾರಿದ್ರ್ಯಗಳ ಬಗೆಗಿನ ಚಿಂತನೆಯೊಂದಿಗೆ, ಅಮಾನವೀಯವಾದ ಜಾತಿವ್ಯವಸ್ಥೆ ಕವಿಯನ್ನು ಕಾಡದೆ ಬಿಟ್ಟಿಲ್ಲ. ಜಾತಿಯ

ನೆಲೆಯಿಂದ ವ್ಯಕ್ತಿಯ ಅಭ್ಯುದಯ, ನಾಡಿನ ಅಭಿವೃದ್ಧಿಯಾಗಲಿ ಸಾಧ್ಯವಿಲ್ಲವೆನ್ನುತ್ತಾ ಮಾನವತೆಯೆ ಒಂದು ಜಾತಿಯಾಗಬೇಕಾದ ಪತ್ರವನ್ನು 'ಹೊನ್ನಿಯ ಮದುವೆ' ಧ್ವನಿಸುತ್ತದೆ.

ಆಶಾವಾದದೊಂದಿಗೆ ಬದುಕನ್ನು ಹತ್ತು ಹಲವು ಕನಸುಗಳೊಂದಿಗೆ ಕಟ್ಟಬೇಕಿರುವ ತುರ್ತನ್ನು ಕಥನಕವನಗಳು ಪದೇಪದೇ ಚಿಂತಿಸುತ್ತವೆ. ಅಸಮಾನತೆಯೇ ಅನಾಥತೆಯನ್ನು ಹುಟ್ಟಿ ಹಾಕುವ ವ್ಯವಸ್ಥೆಯೂ ಕವಿಯಿಂದ ಧಿಕ್ಕರಿಸಲ್ಪಟ್ಟಿದೆ.

ಕಡೆಂಗೋಡ್ಲು ಶಂಕರ ಭಟ್ಟರ ಕಥನಕವನಗಳು ಸಮಾಜದ ಅಭಿವ್ಯಕ್ತಿಗಳ ಪ್ರತಿನಿಧಿಕಗಳೂ ಹೌದು. ಅವು ಗಂಭೀರವೆನ್ನುವಷ್ಟು ಗಟ್ಟಿಯಾದ ಮಹತ್ವಗಳನ್ನೇನೂ ಪ್ರತಿಪಾದಿಸುವುದಿಲ್ಲ. ಅವರ ಸಹಜವಾದ ಧೋರಣೆಗೆ ಅನುಗುಣವಾಗಿಯೇ ಈ ತೆರನಾದ ಕಥನಕವನಗಳು ರಚನೆಗೊಂಡಿವೆ.

ಹೊನ್ನಿಯ ಮದುವೆ, ಹೆಣ್ಣು, ಮಾದ್ರಿಯ ಚಿತೆ, ಭೂತಾಳ ಪಾಂಡ್ಯ ಕಥನಕವನಗಳಲ್ಲಿ ಸಾವು–ನಂಬಿಕೆ, ಮೌಢ್ಯ ಬದುಕಿನ ಅಸ್ಪಷ್ಟತೆ ಗೊಂದಲ, ಅಸ್ತಿತ್ವದ ಹುಡುಕಾಟಗಳೇ ಮೊದಲಾಗಿ ವ್ಯಂಗ್ಯದೊಂದಿಗೆ ತೆರೆದುಕೊಂಡು ಗಂಭೀರವಾದ ಬದುಕಿನ ಅರ್ಥದ ಹುಡುಕಾಟ ನಡೆಯುತ್ತದೆ. ಪದೇ ಪದೇ ಬದುಕು ತೀರಾ ವೈಯಕ್ತಿಕವಾಗಬಹುದಾದ ಸಂಗತಿಗಳನ್ನೇ ಕವಿತೆಗಳು ಮಾರ್ದನಿಗೈಯುತ್ತವೆ. ಸಾಮಾನ್ಯ ಸಂಗತಿಗಳ ರೂಪದಲ್ಲಿ ತೆರೆದುಕೊಳ್ಳುವ ಕವನಗಳು ಅದೇ ಧಾಟಿಯಲ್ಲಿ ಅವುಗಳ ಒಳಅರ್ಥವನ್ನು ಹುಡುಕಾಡಲು ತುಡಿಯುವಂತೆ ಕಾಣುತ್ತವೆ.

ಬದುಕಿನ ಗಂಭೀರತೆ ಮತ್ತು ಸಾವನ್ನು ಕುರಿತ ನಂಬಿಕೆ, ಮೌಢ್ಯವಾಗುವ ವಸ್ತುವಿನ ಹಿನ್ನೆಲೆಯಲ್ಲಿ ಹೊನ್ನಿಯ ಮದುವೆ, ಭೂತಾಳ ಪಾಂಡ್ಯ, ಮಾದ್ರಿಯ ಚಿತೆ, ಹೆಣ್ಣು ಈ ಕಥನ ಕವನಗಳು ತೆರೆದುಕೊಳ್ಳುತ್ತವೆ. ಪ್ರತಿಮೆಗಳನ್ನೇನೂ ಕಾವ್ಯದ ಕಸರತ್ತಿಗೆ ಬಳಸಿಕೊಳ್ಳದೆ ಮತ್ತದೇ ತಮ್ಮ ಸಹಜ ಸರಳತೆಯಲ್ಲಿ ಮಾತ್ರ ಸಂಭಾಷಣೋಪಾದಿಯಲ್ಲಿಯೇ ಕಥನಕವನಗಳನ್ನು ರಚಿಸುವ ಕವಿ ಅದರೊಳಗೆ ಬದುಕನ್ನು ಕಾಣಿಸಿಕೊಳ್ಳುವ ಕ್ರಿಯೆಗೆ ಇಂಬುಕೊಡಲು ಯತ್ನಿಸಿದ್ದಾರೆ.

ಸಾಧಿಸಲು ಆಗಸದಲ್ಲಿರುವಾಗ ಆ ನಿಟ್ಟಿನ ಪ್ರಯತ್ನಗಳಷ್ಟೇ ಜೀವನವನ್ನು ಅರ್ಥಪೂರ್ಣಗೊಳಿಸಬಲ್ಲವು. ಪಲಾಯನವಾದಗಳಿಂದ ಸಾಬೀತಾಗುವುದು ಏನೂ ಇಲ್ಲ. ಕವಿ ಅವಕಾಶವಿದ್ದಲೆಲ್ಲಾ ಮನುಷ್ಯನ ಕ್ರಿಯಾಶೀಲತೆಯನ್ನೇ ಪ್ರತಿಪಾದಿಸುತ್ತಾರೆ.

ಬದುಕಿನಲ್ಲಿ ವಾಸ್ತವವನ್ನು ಒಪ್ಪದಿದ್ದರೆ ಕೆಲವೊಮ್ಮೆ ಆತ್ಮ ಸ್ಥೈರ್ಯವೇ ಕುಗ್ಗಿಹೋಗಬಹುದು ಎನ್ನುವುದನ್ನು ಕವಿ ಕಡೆಂಗೋಡ್ಲು ಶಂಕರ ಭಟ್ಟರು 'ಹೆಣ್ಣು' ಕಥನಕವನದಲ್ಲಿ ಅರ್ಥಪೂರ್ಣವಾಗಿ ವಿವೇಚಿಸಿದ್ದಾರೆ.

ಹೊನ್ನಿಯ ಕಥೆ ದುಃಶಾಂತವಾದದ್ದು. ಗೌಡನ ಮಗನೊಡನೆ ಹಸುರು ಹಂದರದಲ್ಲಿ ವೈಭವದಿಂದ ನಡೆಯಬೇಕಾಗಿದ್ದ ಹೊನ್ನಿಯ ಮದುವೆಯು, ಮದುವೆ

ದಿನ ಬೆಳಗಾಗುವ ಮುಂಚೆ ಕಡಲತಳದಲ್ಲಿ ನೀರಮಸಣದಲ್ಲಿ ಒಲಿದ ಚೆನ್ನನೊಡನೆ ನಡೆಯುವುದು.

ಕುರುಡು ತಂದೆಗೆ ಒಬ್ಬಳೇ ಮಗಳು ಹೊನ್ನಿ. ಆಕೆಯ ದುರ್ದೈವ ಆಕೆ ಮಾತನಾಡುವ ಮಾತುಮೀರುವ ಸ್ವಭಾವದವಳಲ್ಲ.

ಒಲಿದ ಚೆನ್ನನನ್ನು ಮನಸಾರೆ ಪ್ರೀತಿಸಿದರೂ ತಂದೆಯ ಬಗ್ಗೆ ಅತೀ ಗೌರವ.

ಹೆತ್ತವನೆಂದರೆ
ಹೆತ್ತವನಲ್ಲ ।
ಹಲವು ಬರಿಸ ಹೊರೆದವನಲ್ಲಾ ?
ತನುವೋ ಜೀವವೂ ।
ಮೆಯ್ಸಿರಿಯೆಲ್ಲವೂ
ಆತನು ಕೊಟ್ಟಾಯಣವಲ್ಲ ಎಂಬ ನಿಲುವನ್ನು ಬಿಡಲಾರದವಳು
ಇದರೊಂದಿಗೆ
ಕಂಡವರನು ಕೈಹಿಡಿದರೆ
ತಂದೆಗೆ ಕೆಂಡ ಮುನಿಸು

ಬಾರದೆ ಇಹುದೆ ? ಎಂದೆನ್ನುತ್ತಾ ತನ್ನ ಪ್ರೀತಿಯನ್ನು ತ್ಯಾಗ ಮಾಡುತ್ತಾಳೆ. ಭೂಮಿಯಿಂದ ದೂರಾಗುತ್ತಾಳೆ.

ಆಗ ಹೊನ್ನಿಯ ತಂದೆ
ಮಗಳೇ ! ತಂದೆಯ
ನುಡಿಯೆನೆ ದೆವ್ವದ
ನುಡಿಯೆಂದೇ ನೀ ಭಾವಿಸಿದೆ
ಇದಿರಾಡುವ
ಪದ್ಧತಿಯಿಲ್ಲದೆ
ಇಂದೆನ್ನನು ವಂಚಿಸಿದೆ

ಈ ಸನ್ನಿವೇಶದಲ್ಲಿ ತಂದೆಯೂ ಕೂಡಾ ಹೊನ್ನಿಯ ಪ್ರೀತಿಯನ್ನು ಗೌರವಿಸುವ ಸಾಧ್ಯತೆಯಿತ್ತು. ಆದರೆ ತನ್ನ ಮೌಲ್ಯದಿಂದ ಹೊನ್ನಿ ತಂದೆಗೆ ಅವಕಾಶ ಕೊಡಲಿಲ್ಲ ಎನ್ನುವುದು ಸೂಚ್ಯವಾಗುತ್ತದೆ.

ಅದೇ ರೀತಿ 'ಮುರಲೀ ನಾದ' ದಲ್ಲಿನ ಕಥಾವಸ್ತು ಪ್ರೇಮವೇ. ಕೊಳಲ ಸವಿಗೆ ಸೋತು ಗಾಯಕನಿಗೆ ಆತ್ಮಾರ್ಪಣೆ ಮಾಡಿ ತನ್ನನ್ನು ಒಲ್ಲೆನೆಂದು ಅವನು ಹೊರಟುಹೋದರೂ ಪ್ರೀತಿ ಕುಂದದೆ ಮನೆ ಮಠ ತಂದೆ ತಾಯಿಯರನ್ನು ಒಟ್ಟು ಸನ್ಯಾಸಿಯ ವೇಶಧರಿಸಿ ಹೊರಟು ಅದೃಷ್ಟ ವಶಾತ್ ಕಾಡಿನ ಆಶ್ರಮವೊಂದರಲ್ಲಿ ಮಾರುವೇಷದಲ್ಲಿರುವ ಪ್ರೇಮಿಯನ್ನೇ ಸಂಧಿಸಿ, ಪ್ರೇಮದ ವೃತ್ತಾಂತವನ್ನೇ ಹೇಳಿಕೊಂಡು ಗುರುತು ತಿಳಿದು ಸುಖದಲ್ಲಿ ಸೇರುತ್ತಾರೆ.

ಈ ಭಾಗದಲ್ಲಿನ ಹೆಣ್ಣಿನ ಪ್ರೀತಿಯಿಂದಾಗಿ ಆಕೆ ತನ್ನ ಪ್ರೇಮಿಯನ್ನ ಪಡೆಯುವಲ್ಲಿ ಸಫಲಳಾಗುತ್ತಾಳೆ. ಅವಳ ಪ್ರೀತಿಯ ಮುಂದೆ ಪ್ರೇಮಿಯು

ಸುಡುವನು ಕಾವಿಯ – ಕವಚಿನ ಮಸುಕ
ಕಡಿವನು ಜಡೆಯ – ನಿರಾಶೆಯ ತೊಡಕ
ಮೊಗಮೊಗದೊತ್ತಿಗೊಳಾದುದು ಸಿದ್ಧಿ ;
ಹಗುರದ ಜೀವಕೆ ದೊರೆತುದು ಬುದ್ಧಿ.

ಎಂದು ತನ್ನ ಬದುಕಿಗೆ ಹಾಕಿದ ನಿರ್ಮಿತಿಯನ್ನು ತಾನೇ ತೆಗೆದು ಪ್ರೇಯಸಿಯೊಡನೆ ಒಂದಾಗುತ್ತಾನೆ. ಈ ಭಾಗವು ವಯಕ್ತಿಗತ ಮೌಲ್ಯಕ್ಕೆ ಉತ್ತಮ ನಿದರ್ಶನವಾಗುವುದಕ್ಕೆ ಸಂಶಯವಿಲ್ಲ.

"ಹೆಣ್ಣು" ಕಥನ ಕವನದಲ್ಲಿನ ನಾಯಕಿಯೂ ಕೂಡಾ ಸಾವನ್ನಪ್ಪುತ್ತಾಳೆ. ಇಲ್ಲಿನ ಸಂಘರ್ಷವು ಅತ್ಯಾಚಾರಿ ಹಾಗೂ ಅತ್ಯಾಚಾರಕ್ಕೆ ಒಳಗಾದವಳ ನಡುವಿನದು ಮಾತ್ರವಾಗದೆ ಅಧರ್ಮ ಹಾಗೂ ಸಹಜ ಧರ್ಮದ ನಡುವಿನ ಸಂಘರ್ಷವೂ ಆಗುತ್ತದೆ.

ಹೆಣ್ಣು ಧರ್ಮದ ಚೌಕಟ್ಟಿನಲ್ಲಿ ಬೆಳೆದ ಕನಸುಗಣ್ಣಿನ ಮಧ್ಯೆ ತನ್ನ ಇತಿಮಿತಿಯನ್ನು ಮೀರಲಾರದವಳು. ಅವಳ ಪಾತ್ರ ಕಲ್ಪನೆ ಕವನದ ಮೊದಲಲ್ಲೇ ಸ್ಫುಟವಾಗುತ್ತದೆ.

ಗುಡಸಲಗುಳಿ, ಹೊಲದ ಬೇಲಿ
ಅವಳ ನುಡಿಗೆ ನಡೆಗೆ ಗೊತ್ತು
ಹುಟ್ಟಿನೊಡನೆ ಬಂದಲಜ್ಜೆ
ಗುರುವಿನಂತೆ ಕಲಿಸಲಿತ್ತು.

ಈ ಲಜ್ಜಾವತಿಯೂ ಎಂದಿಗೂ ತನ್ನ ಎಲ್ಲೆ ಮೀರಿ ನಡೆಯಲಿಲ್ಲ. ಅದು ಅವಳ ವ್ಯಕ್ತಿಗತ ಮೌಲ್ಯ.

ತಿಮ್ಮೆಗೌಡ ಬಂದು ಆಸೆಯ ಆಕರ್ಷಕ ಲೋಕವನ್ನು ತೆರೆದು ತೋರಿಸದಾಗ ತಾನೂ ಒಮ್ಮೆಗೆ ಮನಸ್ಸು ಆಚೀಚೆ ತೊನೆದಾಡಿತ್ತು.

ಇರಲು ಹಚ್ಚೆ ಕುಸಿಯ ಸೊಗದ
ಹಸನುಹಬ್ಬ ಕಣ್ಣ ಮುಂದೆ
ಸವಿಯದಿರಲು ಕಷ್ಟವಾಯ್ತು
ಸವಿವೆನೆನಲು ಭೀತಿಯಿತ್ತು.

ಬಿರುಸುಗಾಳಿಯಂತೆ ಬಂದ ಮಾರ ಆಕೆಯ ಜೀವನವನ್ನು ತುಂಬಿದ್ದಾನೆ. ಆತನಿಂದ ಬಂದ ಪತ್ರಗಳ ಮೂಲಕ ಆತನ ಸಾವಿನ ಸುದ್ದಿಯನ್ನು ತಿಳಿಸಿದ ರಾಯಸಿಗರ ಮೂಲಕ.

"ಬೇರೆ ಜನಕೆ ಬದುಕ ಹಂಚಿ ತನಗೆ ಸಾವನ್ನಿಟ್ಟು ಕೊಂಡ". ಮಾರನ ಹಿರಿದಾದ ವ್ಯಕ್ತಿತ್ವ ಆಕೆಯ ಮನಸ್ಸನ್ನು ಆವರಿಸಿದೆ. ಏಕೆಂದರೆ

ಮಾರನೊಬ್ಬ ಪುರುಷರತ್ನ
ಗುಣಕೆ ತಗುವ ತೆರದಿ ಸತ್ತ
ಹೊಟ್ಟೆ ಹೊಸೆದು ಅತ್ತು ಕರೆಯೆ
ತೋರಲುಂಟೆ ಮೊಗವನಿತ್ತ ! ಎಂದೆನ್ನುತ್ತ ಮಾರನ ಗುಣವನ್ನು ಸದಾಸ್ಮರಿಸುತ್ತಾಳೆ. ಮಾರ ಕೊಟ್ಟುಹೋದ ಜೀವಫಲದಲ್ಲೇ ಮತ್ತೆ ಆತ ಅವಿರ್ಭವಿಸಿಯಾನು, ತನ್ನ ಸಿರಿಯನ್ನೆಲ್ಲ ಈತನ ನಡೆನುಡಿಗಳಲ್ಲಿ ತಂದುಕೊಟ್ಟಾನು ಎನ್ನುವ ನಿರೀಕ್ಷೆಯಿದೆ. ಆದ್ದರಿಂದಲೇ ಆಕೆ ಮಾರನ ಸಾವಿನ ಆಘಾತದಿಂದಲೂ ಚೇತರಿಸಿಕೊಂಡು ಉಳಿದಿದ್ದಾಳೆ.

ಈ ರೀತಿಯ ಗಟ್ಟಿ ಮನೋಧರ್ಮವೇ ಆಕೆಯ ಮಾನಸಿಕ ಕುಸಿತವನ್ನು ತಡೆದಿದೆ. ಅಲ್ಲದೆ ತಿಮ್ಮ ಗೌಡನ ವ್ಯಕ್ತಿತ್ವವೂ ಆಕೆಯದಕ್ಕಿಂತ ತದ್ವಿರುದ್ಧವಾದುದು. ಆತನ ಸ್ವಭಾವವನ್ನು ಈ ಕೆಳಗಿನ ಸಾಲುಗಳು ಅರ್ಥಪೂರ್ಣವಾಗಿ ವಿವರಿಸುತ್ತದೆ.

ಮನೆಯ ಹಿಂದೆ ಬೇಲಿ ದಾಟಿ
ವಾಗಿಲಗುಳಿ ಮುರಿದು ಮೀಟಿ, ಒಳಗೆ ಬರುವವನು
ಪ್ರೇತಭೂತಕ್ಕಿಲ್ಲದಿರುವ ಕಾರಣಿಕದಿ ಹಳ್ಳಿಯವರ ಗೋಳಾಡಿಸಬಲ್ಲವನು ಮೃಗವೆನುತ್ತೆ ಕರೆದರವನ ಕಾಡ ಜಾತಿ ಕೆರಳದಿಹುದೆ ?

ಎನ್ನುವ ಸಂಶಯವನ್ನು ಹುಟ್ಟಿಸಬಲ್ಲವನು, ಆದ್ದರಿಂದಲೇ ಪ್ರಕೃತಿ ಧರ್ಮದ ಕುರಿತಾದ ಅವನ ವಾದಗಳು ಶರಧಿ ಹಾಗೂ ಭೂಮಿಯ ಕೂಡುವಿಕೆಯಂಥ ಅನ್ಯೋಕ್ತಿಗಳು ಆಕೆಗೆ ಹಳೆಯ ಮಾತುಗಳಾಗಿ

ನೆಲವ ಸುತ್ತು ಬೀಜ ಬಿತ್ತಿ
ಮೊಳೆಯನೆತ್ತಿ ತಂದುದಾಯ್ತು
ಊರಿ ನೀರ ನೆರೆದು ಬೇರು
ಬಲಿಯುವುದನು ಕಂಡುದಾಯ್ತು
ಒಂದು ಚಿಗುರು ಮೂಡುತಿರಲಿ ಎನ್ನುವ ಧೋರಣೆಯೊಂದಿಗೆ
ಒಪ್ಪುಕೊಳ್ಳಿ ನಿಮ್ಮೊಡವೆಯ
ಬಯಸಬೇಡಿ ಪರರ ಸೊತ್ತ ; ಎಂದು

ತನ್ನ ಮನೋಭಿಪ್ರಾಯವನ್ನು ತಿಮ್ಮ ಗೌಡನಿಗೆ ಸ್ಪಷ್ಟಪಡಿಸುತ್ತಾಳೆ. ಮತ್ತೂ ಆತ ಬಲಾತ್ಕರಿಸಲು ಹವಣಿಸಿದಾಗ ಆಕೆ ಅನಿವಾರ್ಯವಾಗಿ ಬಾಳಿನಲ್ಲಿ ಸೋಲೊಪ್ಪಿ ಸಾವಿನಲ್ಲಿ ಧೈರ್ಯಗೆಡಲು ಕಾರಣ ಆಕೆಯ ವೈಯಕ್ತಿಕ ಮೌಲ್ಯಗಳು.

ಈ ವೈಯಕ್ತಿಕ ಮೌಲ್ಯದ ಪರಿಣಾಮವಾಗಿಯೇ "ಆಕೆಯ ಸಾವು ಸಾವಾಗದೆ, ಮರಣದಲ್ಲಿ ಧೈರ್ಯವಿಟ್ಟು ಹೊರಟ ಮಹಾಪ್ರಸ್ಥಾನವಾಗುತ್ತದೆ" ಎಂಬ ಸುಬ್ರಾಯ ಚೊಕ್ಕಾಡಿಯವರ ಮಾತು ಸಮರ್ಥನೀಯ.

ಭೂತಾಳ ಪಾಂಡ್ಯ ಕಥನಕವನವು ಕಡಲಲ್ಲಿ ಅಬ್ಬರದ ಬಿರುಗಾಳಿಯನ್ನು ಕಂಡು ವ್ಯಾಪಾರಕ್ಕೆ ತೆರಳಿದ ನಾವಿಕರ ಬಗೆಗೆ ಭೂತಾಳ ಪಾಂಡ್ಯ ಆತಂಕಗೊಳ್ಳುವ ಸನ್ನಿವೇಶದೊಂದಿಗೆ ಕಾವ್ಯ ಮೊದಲಾಗುತ್ತದೆ.

ನಾವೆ ಕಡಲಿಗಿಳಿದು ವ್ಯವಹಾರ ಸಾಂಗವಾಗಬೇಕಾದರೆ ದೈವವು ನರಬಲಿ ಬೇಡುತ್ತದೆ. ಆದರೆ ನರಬಲಿಗಾಗಿ ಯಾರೂ ಒಪ್ಪಲಾರರು. ಯಾಕೆಂದರೆ ಬದುಕು ಎಲ್ಲರಿಗೂ ಮುಖ್ಯ.

ಎಲೆ ಭಕ್ತಾ ಹೇಳಾತನಿಗೆ
ದೇವ ಪಾಂಡ್ಯನಿಗೆ ; ಎನಗೊಂದು ನರಬಲಿ ಕೊಡದೆ
ಹಡಗನತ್ತಿತ್ತ ಕದಲಿಸಿದನಾದರೆ ಘೋರ
ಸಂಕಟದಿ ಸಿಲುಕುವನು.

ಎಂದು ಜೋಯಿಸರಾಡಿದ ಮಾತಿನಿಂದ ಅವರ ಮಾತನ್ನು ನಿರಾಕರಿಸಿ ತಟಸ್ಥವಾಗಲು ಅವರ ಮನಸ್ಸು ಒಪ್ಪಲಿಲ್ಲ. ಕಾರಣ ಸಮಷ್ಟಿಯ ಹಿತಕ್ಕಾಗಿ ವೃದ್ಧಿಯ ಬಲ. ಇದು ಭಾರತೀಯ ಶ್ರದ್ಧೆ. ಅಜ್ಞಾನವಾದರೂ ನೂರಾರು ಜನರ ಕಂಬನಿಗಳು ದುಖವಲ್ಲ ಅದನ್ನು ತಡೆಯಬೇಕು. ತಂದೆ ಮಕ್ಕಳಿಗಾಗಿ, ಹೆಣ್ಣು ಪುರುಷನಿಗಾಗಿ ಬಂಧು ಬಂಧುವಿಗಾಗಿದೇಹವನು ಸವೆಯಿಸರೆ ಎಂಬ ತಿಳುವಳಿಕೆಯ ಬೆಳಕಿನಲ್ಲಿ ತನ್ನ ಜೀವನ ಪಟನ ಪೂರ್ಣಾಹುತಿಗೆ ಅಣಿಯಾಗುತ್ತಾನೆ.

ಈ ಕಥನಕವನದ ಭಾಗವೂ ವಯಕ್ತಿಕ ಮೌಲ್ಯಕ್ಕೆ ಉತ್ತಮ ನಿದರ್ಶನವಾಗಿದೆ.

**ಕಡೆಂಗೋಡ್ಲು ಅವರ ಕಥನಕವನಗಳಲ್ಲಿನ ಕೌಟುಂಬಿಕ ಮೌಲ್ಯಗಳು :**

ಕೌಟುಂಬಿಕ ವ್ಯವಸ್ಥೆಯ ಪ್ರೀತಿವಾತ್ಸಲ್ಯಗಳು ರೂಪುಗೊಳ್ಳಲು ಕಾರಣವಾಗುತ್ತದೆ. ಭಾರತೀಯ ಸಂಸ್ಕೃತಿಯ ಸಂದರ್ಭದಲ್ಲಿ ಕುಟುಂಬ ವಯವಸ್ಥೆ ನೀಡಿರುವ ಕೊಡುಗೆ ಅಧಿಕವಾದದ್ದು. ಆ ಹಿನ್ನೆಲೆಯಿಂದಲೂ ಗಂಡ–ಹೆಂಡತಿ ಎನ್ನುವ ಸಂಸಾರದ ಸಂಬಂಧ ಜನ್ಮಾಂತರದ ಪರಿಕಲ್ಪನೆಗೂ ಚಾಚಿದೆ. ಮದುವೆ ಸ್ವರ್ಗದಲ್ಲಿ ಎನ್ನುವ ಅಲೌಕಿಕ ತೀರ್ಮಾನದ ನೆಲೆಯಲ್ಲಿಯೂ ಈ ವಿವಾಹ ವ್ಯವಸ್ಥೆಯನ್ನೇ ದೈವೀಕರಿಸುವ ಪ್ರಯತ್ನ ಮೊದಲಿನಿಂದಲೂ ನಡೆದು ಬಂದಿದೆ. ಮನುಷ್ಯ ಸಂಬಂಧಗಳನ್ನು ಗೌರವಿಸುವ ಮತ್ತು ಅದು ಸರ್ವಕಾಲಿಕ ಶ್ರೇಷ್ಟವೆಂದು ಪ್ರತಿಪಾದಿಸುವ ಸಂಸ್ಕೃತಿಯೊಳಗೆ ಈ ಬಗೆಯ ಪ್ರಯತ್ನಗಳು ನಿರಂತರವಾಗಿರುತ್ತವೆ.

ಹೊಸ ಶಿಕ್ಷಣದಿಂದಾಗಿ ಪಲ್ಲಟಗೊಳ್ಳುತ್ತಿದ್ದ ಕೌಟುಂಬಿಕ ವ್ಯವಸ್ಥೆ ಎಲ್ಲಿ ಶಿಥಿಲವಾಗುತ್ತದೊ ಎಂಬ ಆತಂಕವು ಸಾರ್ವತ್ರಿಕವಾದ ಒಂದು ಭಾವನೆ.

ಕಡೆಂಗೋಡ್ಲು ಶಂಕರ ಭಟ್ಟರ ಕಾಲ ಸ್ವಾತಂತ್ರ ಪೂರ್ವದಲ್ಲಿ ಮತ್ತು ಸಂಪ್ರದಾಯಿಕವಾದ ಹಿನ್ನೆಲೆಯಲ್ಲಿ ರೂಪಿತಗೊಂಡದ್ದೂ ಆಗಿತ್ತು. ಆದ್ದರಿಂದಲೂ

ಅವರ ಕಾವ್ಯದ ಮೊದಲ ವಸ್ತುಪಿಗೆ ಕೆಲವು ಪರಿಮಿತಿಗಳೂ ಕಾಡಿರಬಹುದು. ಆದರೆ ಇಡಿಯಾಗಿ ಕಪಿಯನ್ನ ಕಟ್ಟಿ ಹಾಕಿವೆಯೆಂದು ಹೇಳಲು ಸಾಧ್ಯವಾಗುವುದಿಲ್ಲ.

ಕವಿ ಎಚ್ಚರಿಕೆಯಿಂದ ಸಂವೇದನಾಶೀಲರಾಗಿಯೇ ಕಾವ್ಯವನ್ನು ಕಟ್ಟುತ್ತಾರೆ. ಒಂದು ಆರೋಗ್ಯಪೂರ್ಣವಾದ ಸಂಪ್ರದಾಯವಂತಿಕೆಯ ಸಾಂಸ್ಕೃತಿಕ ಶೀಲವಂತಿಕೆಯ ನಿಲುವನ್ನು ಕವಿ ತಮ್ಮ ಕಥನಕವನಗಳ ಸಂದರ್ಭದಲ್ಲಿ ಪ್ರಕಟಿಸುತ್ತಾರೆ.

ಕವಿಯ ಪ್ರೇಮವಸ್ತು ನಿರೂಪಣೆಯಲ್ಲಿ ಸಹಜವಾದ ಚಿಂತನೆಯಿದೆ. ಗಂಡು ಹೆಣ್ಣಿನ ಪ್ರೇಮವನ್ನು ದಾಂಪತ್ಯದ ಚೌಕಟ್ಟಿನಲ್ಲಿಟ್ಟು ನೋಡಬಯಸುವ ಕಾಲಮಾನದ ದೃಷ್ಟಿಕೋನದಿಂದಲೇ ಕವಿಯ ವಸ್ತು ಕುರಿತ ನಿಲುವನ್ನು ಅರಿಯಬಹುದಾಗಿದೆ.

ಸಾಮಾಜಿಕ ವ್ಯವಸ್ಥೆಯಲ್ಲಿ ಸೊಗಸು ಎಂದುಕೊಂಡು ಮಾನವೀಯ ಎಂದು ಕೊಂಡು ಉಳಿದು-ತಿಳಿದು ಬಂದ ವಿಚಾರಗಳನ್ನು ಗೌರವಿಸುವ ಹೃದಯವಂತಿಕೆ ಕವಿಗಿದೆ. ಅಲ್ಲದೆ ಅದು ಕವಿ ಕಾವ್ಯ ಸ್ಪರ್ಧಿಸುವ ಕಾಲಕ್ಕೆ ಪ್ರೇಮವನ್ನು ದಾಂಪತ್ಯದಿಂದ ಆಚೆಗೆ ಕಲ್ಪಿಸುವುದಾಗಲಿ ಅದನ್ನು ಒಪ್ಪಿತ ನೆಲೆಯಲ್ಲಿ ಚಿತ್ರಿಸುವುದಾಗಲಿ ಸುಲಭವಾದುದಾಗಿರಲಿಲ್ಲ. ಅದು ಅಂದಿನ ಕಾಲದ ಕೌಟುಂಬಿಕ ಮೌಲ್ಯಗಳೂ ಆಗಿತ್ತು ಎನ್ನುವುದನ್ನು ನಾವು ಗಮನಿಸಬೇಕು.

ಕೌಟುಂಬಿಕ ವ್ಯವಸ್ಥೆಯಲ್ಲಿ ಸಂಬಂಧಗಳದ್ದೇ ಒಂದು ಅಪೂರ್ವವಾದ ಪ್ರಪಂಚ. ಸಂಬಂಧಗಳು ನೀಡುವ ಮೌಲ್ಯಗಳೇ ಪ್ರತಿಯೊಂದು ಪಾತ್ರ ಪೋಷಣೆ ಮಾಡುತ್ತವೆ.

ಹೊನ್ನಿಯ ಮದುವೆ, ಮಾದ್ರಿಯ ಚಿತೆ, ಮುರಲೀ ನಾದ, ಹೆಣ್ಣು, ಭೂತಾಳ ಪಾಂಡ್ಯ ಕಥನಕವನಗಳೆಲ್ಲಾ ಕೌಟುಂಬಿಕ ಮೌಲ್ಯಗಳನ್ನು ಹತ್ತು ಹಲವು ರೀತಿಯಿಂದ ಬಿಂಬಿಸುತ್ತದೆ.

"ಹೊನ್ನಿಯೆ । ನೀನೆ ?
ಎನ್ನೆದೆ ತಂದಿಪೆ
ಮೋಹದ ನೆಳಲಾಗಿಹೆ ಮಗಳೇ

ಎಂದೆನ್ನುವ ಹೊನ್ನಿಯ ತಂದೆ, ಮಡದಿ ಸತ್ತ ನೋವನ್ನು ತನ್ನ ಮಗಳಿಂದ ಮರೆಯುತ್ತಾರೆ.

ತೋರದ ನಾಡನು
ಸೇರ್ದಳು ಹೊನ್ನಿಯೇ
ನಿನ್ನನು । ಹೆತ್ತಾ ಸಿಂಗಾರಿ
ನಿನ್ನಯ ಕನ್ನಡಿ
ಮೊಗದಲಿ ಕಂಡೆನು

ಆಕೆಯ ಜಿಂಬವ ಸಲವೇರಿ ಎನ್ನುವ ಮಾತು ಕವಿ ಹೊನ್ನಿಯ ತಂದೆಯ ಅನುಪಮ ದಾಂಪತ್ಯವನ್ನು ಬಿಂಬಿಸುವಲ್ಲಿ ತೋರಿದ ಜಾಣ್ಮೆಯಾಗಿದೆ.

ನಿನ್ನಬ್ಬೆಯ ಜತೆ
ಗಾಳಿದ ಮನೆಯನು
ಇನ್ನೊಬ್ಬಳ ಜತೆ ಗಾಳುವೆನೆ? ಎಂದೆನ್ನುತ್ತಾ

ತಂದೆ ಪ್ರತಿಪಾದಿಸುವ ದಾಂಪತ್ಯ ಧರ್ಮ ಹೊನ್ನಿಯನ್ನು ಕೌಟುಂಬಿಕ ವ್ಯವಸ್ಥೆಯಲ್ಲಿ ಮುಂದೆ ಬಂಧಿಯಾಗುವಂತೆ ಮಾಡಿತು ಎಂದರೆ ಅತಿಶಯೋಕ್ತಿ ಏನಿಲ್ಲ.

ಅದೇ ರೀತಿ ತಂದೆ ನೋಡಿದ ಸಂಬಂಧವನ್ನೇ ಮೆಚ್ಚಿ ಹೊನ್ನಿ ಮದುವೆ ಮಾಡಬೇಕೆಂಬುದು ಹೊನ್ನಿಯ ತಂದೆಯ ಆಸೆ. ಹಾಗಾಗಿ

ಎನ್ನಿ । ಒಡಲಿನ
ಗೂಡಿಂ ಜೀವವು
ಹಾರುವುದಲ್ಲವೇ? ನೀ ಮತ್ತೆ
ಅವನನೇ ಕೈ ಹಿಡಿ
ಹೆಂಡತಿಯಾಗಿರು
ತಂದೆಯ ಭಾಷೆಯನೆಣಿಸುತ್ತೆ.

ಈ ರೀತಿ ತನ್ನ ಮಾತಿನಿಂದ ಮಗಳನ್ನು ಬಂಧಿಸುತ್ತಾನೆ. ಈ ವ್ಯಾಮೋಹಕ್ಕೆ ಹೊನ್ನಿ ತನ್ನ ಪ್ರೀತಿಯನ್ನು ತ್ಯಾಗಮಾಡಬೇಕಾಗುತ್ತದೆ.

ಆದರೆ ಒಲಿದ ತನ್ನ ಆಕೆಗೆ ನೀಡಿದ ಉಪದೇಶ

ನಿಜವನು ನುಡಿ । ಬಾ
ಲಿಕೆ । ನಿಷ್ಠುರತೆಗೆ
ಬೆದರದೆ ನುಡಿ ತುಟಿಗಳನೆತ್ತಿ
ಬಡವರ ನಲ್ಮೆಗು
ನಿಮ್ಮಯ ಕೊರ್ಮೆಗು
ಭೇದವಿಹುದೇ? ಹೇಳೊತ್ತೊತ್ತಿ.

ಮನೆತನದ ಮರ್ಯಾದೆಗಾಗಿ ತನ್ನ ಪ್ರೀತಿಯನ್ನು ಕಳೆದು ಕೊಳ್ಳಲು ಚೆನ್ನನಿಗೆ ಇಷ್ಟವಿಲ್ಲ. ಈ ಮಾತನ್ನು ಆತ ಸೂಚ್ಯವಾಗಿ ಹೊನ್ನಿಗೆ ಹೇಳುತ್ತಾರೆ.

ಆದರೆ ಹೊನ್ನಿಯ ತಂದೆಯಾದರೂ ಊರಿನ ಜನರಿಗೆ ಬುದ್ಧಿ ಹೇಳಲು ಯೋಗ್ಯತೆ ಸಂಪಾದಿಸುವವನು.

ಊರಿನ ಮಂದಿಗೆ
ತೋರುತ ದಾರಿಯ
ನಡೆಯಿಪನಲ್ಲವೆ ಎನ್ನ ಪಿತ !
ಕಟ್ಟೆಂದರೆ, ಹಳೆ

ಕಟ್ಟಳೆ ಎಂದರೆ ಆತನ ಸುಳಿಯಿಪ ಪುಣ್ಯಪಥ.

ಊರೇ ಆತನ ಮಾತನ್ನು ಮೀರಲಾಗದು. ಹಾಗಿರುವಾಗ ಹೊನ್ನಿ ಆತನ ಮಾತನ್ನು ಮೀರಲು ಸಾಧ್ಯವೇ !

ಹೊನ್ನಿಗೆ ಹೆತ್ತವನೆಂದರೆ ಹೊತ್ತವನು. ಜೀವನ ಬದುಕು. ಆತ ಕೊಟ್ಟ ಋಣ ಎಂಬ ನಿಲುವು ಆಕೆಯದು. ಕಂಡವನು ಕೈ ಹಿಡಿದರೆ ಕೆಟ್ಟ ಮುನಿಸನ್ನು ಹೊನ್ನಿ ಎದುರಿಸಬೇಕಾಗುತ್ತದೆ.

ಈ ಪರಿಯಲಿ ಕೈ
ಹಿಡಿವುದು ಬಿಡುವುದು
ನಮ್ಮಧಿಕಾರಕ್ಕೆ ಸೇರದುದು
ಮನೆತನಗಳ ನಡೆ
ವಳಿಯೆಂತಂತೆಯೆ
ನಡೆಯುವುದೆ ನಮ್ಮಯ ಕುಲವಿಹುದು.

ಕಟ್ಟಳೆ ಮೀರುವ ಹೆಣ್ಣು ತಾನಲ್ಲ. ಹಾಗೆಂದು ಒಲಿದ ಚೆನ್ನನನ್ನು ವರಿಸುವಂತಿಲ್ಲ. ಆಕೆಯ ಪಾಲಿಗೆ ಮದುವೆ ಎಂದರೆ ಹೆಣ್ಣಿನ ಬಲಿ. ಮನದೊಲವಿಲ್ಲದೆ ಅವಳನ್ನು ಗಂಡನೊಬ್ಬನ ಮನೆಗೆ ನೂಕಲು ಅದು ಮದುವೆ ಎನಿಸುವುದೇ ? ಎಂಬುದು ಹೊನ್ನಿಯ ಮನದಳಲು. ಒಂದೆಡೆ ತಂದೆಯ ಮಾತುಮೀರದ ಸ್ವಭಾವ, ಇನ್ನೊಂದೆಡೆ ಒಲಿದ ಚೆನ್ನನನ್ನು ಬಿಟ್ಟಿರಲಾರದ ಭಾವ ಹಾಗಾಗಿ ತನ್ನ ದುರಂತವನ್ನು ತಾನೇ ತಂದುಕೊಳ್ಳುತ್ತಾಳೆ.

ತನ್ನ ಮಗಳನು ಕಾಣದ ತಂದೆ
ಗೋಳಿಟ್ಟೆಂದನು :–
ಹೊನ್ನಿಯೇ ಜೀವವೇ
ಕಣ್ಣೇ ಗತಿಯೇ । ಬಾರಿಂದು
ಮದುವೆಯ ಮಾಡೆನು
ಕಟ್ಟೆನು ಮೀರ್ವನು
ಮೂಡಲಿ ಹೊಂಬಾಳೆಯಕಂದು !! ಎಂದು
ಅತೀ ಪ್ರೀತಿಯಲಿ ತನ್ನ ನಿರ್ಧಾರವನ್ನು ಬದಲಿಸುತ್ತಾನೆ.

ಆದರೆ ಹೊನ್ನಿ ಮಾತ್ರ ಪಡುಗಡಲಿನ ಕಡಲಿನ ಅಲೆಗಳ ಅಬ್ಬರಕ್ಕೆ ಬಲಿಯಾಗುತ್ತಾಳೆ.

ಕಟ್ಟಳೆಕಟ್ಟಿತು
ಹೊನ್ನಿಯ ಚೆನ್ನನ
ತನುಗಳ ಹಿಡಿದೀ ನೆಲದಲ್ಲಿ
ಕಟ್ಟಳೆಯುಂಟೇ ?
ಕಟ್ಟುಗಳುಂಟೇ ?

ಪಡುಗಡಲಿನ ತೆರೆಯಾಳದಲಿ

ಎಂಬ ಸಾಲುಗಳೊಂದಿಗೆ ಕಥನಕವನ ಕೊನೆಗೊಳ್ಳುತ್ತದೆ. ಕೌಟುಂಬಿಕ ಮೌಲ್ಯಗಳಿಂದಾಗಿ ಹೊನ್ನಿ ತನ್ನ ಬಾಳನ್ನು ಕೊನೆಯಾಗಿಸುತ್ತಾಳೆ.

"ಮಾದ್ರಿಯ ಚಿತೆ" ಕಥನಕವನದಲ್ಲೂ ಕೂಡಾ ಹಲವು ಪದ್ಯಗಳ ಮೂಲಕ ಕವಿ ಕೌಟುಂಬಿಕ ಮೌಲ್ಯಗಳನ್ನು ಕಟ್ಟಿಕೊಡುತ್ತಾರೆ. ಹೆಸರೇ ಸೂಚಿಸುವಂತೆ ಮಹಾಭಾರತದ ಪಾಂಡು ಮಾದ್ರಿಯರ ದುರಂತ ಸಮಾಗಮದ ಕತೆ.

ಬರುತಿಹುದು ಬರುತಿಹುದು ಸಂಸಾರಸಾರಗಳ
ಮಸಗಿ ಹೀರಿದ ನೆನಪು ಸುಖದ ನೆನಪು
ಅನುಭವದಿ ಮಸೆ ಮಸೆದು ಥಳಥಳಿಸುವಾ ನೆನಪು
ಜೀವಗೋತಿ ಮಾಡಲೆ । ಕಡಿವ ನೆನಪು
ಎಲ್ಲ ಸಂಸಾರ ! ಸಂಸಾರದಲ್ಲಿಯ ಬೇರು !

ಎಂಬ ಪದ್ಯದಲ್ಲಿ ಕವಿ ಸಂಸಾರದ ಪ್ರಸ್ತಾಪ ಸುಖ ದುಃಖದ ನೆನಪು ಮಾಡುತ್ತಾರೆ.

ಸಂಸಾರ ಸುಖ ದುಃಖದ ಆಗರ. ಹುಟ್ಟು ಜೀವರಾಶಿಯ ಪ್ರಾರಂಭವಾದರೆ ಸಾವು ಅದರ ಕೊನೆ. ಹುಟ್ಟು ಸಾವಿನ ನಡುವಿನ ಅಂತರವೇ ಕಾಲ. ಈ ನಡುವಿನ ಹೋರಾಟವೇ ಬದುಕು. ಹುಟ್ಟು ಬದುಕುಗಳಂತೆ ಸಾವೂ ಕೂಡಾ ವಯಕ್ತಿಕವಾದರೂ ಪರಿಣಾಮ ಮಾತ್ರ ಒಂದೇ. ಈ ಬಗೆಯ ಹಲವು ಕಾರಣಗಳಿಂದ ಹುಟ್ಟು ಸಾವುಗಳು ಕಾವ್ಯ ಸಂದರ್ಭದಲ್ಲಿಯೂ ವಿಶಿಷ್ಟವಸ್ತುಗಳಾಗಿಯೇ ಪರಿಗಣಿತವಾಗಿದೆ.

ಮಾದ್ರಿಯ ಪಾತ್ರವನ್ನು ಅವಲೋಕಿಸಿದಾಗ ಆಕೆ ಸಾವಿಗೆ ಅಂಜುವವಳಲ್ಲ. ಇದ್ದಷ್ಟು ದಿನ ಚೆನ್ನಾಗಿ ಬದುಕಬೇಕು. ಭೂಮಿಯ ಸುಖವನ್ನು ಪಡೆಯಬೇಕು ಎಂಬ ನಿಲುವು ಅವಳದು. ಈ ಹಿನ್ನೆಲೆಯಲ್ಲಿ ಕವಿ ಕೆ.ಎಸ್. ನರಸಿಂಹಸ್ವಾಮಿಯವರ ಹುಟ್ಟು–ಸಾವು–ಕಾಲ ಕವನ ಈ ಸನ್ನಿವೇಶಕ್ಕೆ ಪೂರಕವಾಗುತ್ತದೆ. ಕವನದ ಸಾಲೊಂದರ ಧ್ವನಿ.

ಸಾವಿಗಂಜುವ ಬದುಕಿಗಿಲ್ಲಿ ನೆಲೆಯಿಲ್ಲ
ನೋವಿರಲಿ, ಚೆಲುಬಹುದು ಬದುಕಿನೊಳಗೆಲ್ಲ
ಈ ಮನೋಧೋರಣೆ ಹೊಂದಿದ ಮಾದ್ರಿ
ಆಸೆಗಾವುದು ಮರ್ದು ? ಅದರ ತೀರ್ಕೆಯ ಹೊರತು
ತೀರದಾಸೆಯ ಭೂತ ಹಲವು ಭವದಿ
ಜೀವಗಳ ಬೆಂಬತ್ತಿ ಕರ್ಮದಲಿ ಕುಣಿಯುವುದು
ಅದಕೆ ಮುನಿಯಾದರೂ ಬೆದರಬೇಕು.

ತನ್ನ ಆಸೆಯನ್ನು ಈಡೇರಿಸಬೇಕೆಂದು ಸಂಕಲ್ಪಿಸಿಕೊಂಡವಳಂತೆ ಮಾದ್ರಿ ಭಾಸವಾಗುತ್ತಾಳೆ. ಯಾಕೆಂದರೆ ಬೇಗೆಯಲಿ ಬೆಂದು ಕುದಿಕುದಿಯುತಿಹ ದೇಹದ ಅಗ್ನಿಗೆ ಆಕೆ ಬಲಿಯಾಗಿದ್ದಾಳೆ.

ಮುನಿಶಾಪದಿಂದ ಅವರೀರ್ವರ ಸಮಾಗಮ ಸಲ್ಲದು. ಮಾದ್ರಿ ಕಪಿಯ ಅನಿಸಿಕೆಯಂತೆ ಕಷ್ಟರಾಶಿಯ ಹೊತ್ತು ಬಾಳಲೆಂದೇ ಪಳಗಿ ಬಂದ ಹೆಣ್ಣು.

ಬದುಕ ಬೇಕೈ, ಬಾಳ ಬೇಕು, ಲೋಕವನೆಲ್ಲ
ಜಯಿಸಬೇಕೈ ಆಳಬೇಕೆಂದು ಗಳಹುವುದೆ
ನಮ್ಮ ಅಧಿಕಾರ ; ಅಂತೆಸಗುವುದೆ ನಮ್ಮ ಬಲ ;
ಅನಿತುದ್ದ ಪೌರುಷವ ಉಕ್ಕೇರಿಸುವುದೇ ಚಲ ;
ಅನುಭವ ತರಂಗಗಳ ಈಜಿ ದಾಟುವುದೇ ಫಲ ;
ಹೊಸ ಕಲ್ಪನೆಯೆ ನಮ್ಮ ಜೀವನಕ್ಕಾಡು ಹೊಲ ;
ಬಾ, ಹೋಗುವಿಲ್ಲೆಂದು ಇಂದ್ರಿಯವ ಬೋದಿಸುವ
ಆದಿತ್ಯ ಶಕ್ತಿಯೊಂದಿರುವುದದೆ ದೈವ ಬಲ

ಎಂದು ಶೋಕಿಸುವಾಗ ಸುಖದಿಂದ ವಂಚಿತವಾದ ಒಂದು ಅತಂತ್ರ ಜೀವಿಯ ದಾರುಣ ಸ್ಥಿತಿಯನ್ನು ಕಂಡು ಸಹೃದಯರ ಚಿತ್ತಕರಗಿ ಹೋಗುವುದು.

ಒಡಲು ಸಾವಿನ ಯಾವ ಹೊಲವಾದರೇನಣ್ಣ ?
ತೊಡಿಸುವೆನು ವನದೇವಿ ಕೊಡುವ ಕಾಣಿಕೆಗಳೇನು ?
ಬಂದು ಮೇಯುವ ಮೃತ್ಯು ಅನಂದದಲಿ ಬಂದು
ತಿಂದು ತೇಗಲಿ ; ಧನ್ಯವೆನಿಸಲದರಾಯುಷ್ಯ

ಎಂಬ ಮಾದ್ರಿಯ ಮನೋವೇದನೆ ಮನಸನ್ನು ಕಲಕುತ್ತದೆ. ಈ ರೀತಿ ಮಾದ್ರಿಯ ಚಿತೆಯಲ್ಲೂ ಬೇರೆ ಬೇರೆ ರೀತಿಯಿಂದ ಕೌಟುಂಬಿಕ ಮೌಲ್ಯಗಳನ್ನು ಕವಿ ನೀಡಿದ್ದಾರೆ.

ಕಡೆಂಗೋಡ್ಲು ಶಂಕರ ಭಟ್ಟರ ಮತ್ತೊಂದು ಕಥನ ಕವನ ಹೆಣ್ಣು ; ಈ ಕವನದಲ್ಲಿ ವಿಸ್ತಾರವಾದ ಸ್ತ್ರೀ ಚಿತ್ರವನ್ನು ಕಾಣಬಹುದು. ಬದುಕಿನ ವ್ಯಾಪಾರದಲ್ಲಿ ಮೂಡಿಬರುವ ಸ್ತ್ರೀ ಚಿತ್ರ ಶಂಕರ ಭಟ್ಟರ ಕಾವ್ಯ ಪ್ರಜ್ಞೆಯನ್ನು ಕೆಣಕಿದ ಯೋಜನೆಗೆ ಹಚ್ಚಿದ ಮುಖ್ಯ ವಸ್ತುವಾಗಿರುತ್ತದೆ.

ಬದುಕಿನ ಇತಿಮಿತಿಗಳು ವಹಿಸಬಹುದಾದ ಸ್ವಾತಂತ್ರ್ಯ ಪ್ರಕೃತಿ ಸಹಜವಾದ ಅದಮ್ಯವೆನಿಸುವ ಬಯಕೆಗಳು ಪ್ರೇಮ ನೋವು ನಲಿವುಗಳು, ಒದಗಿಬರುವ ದುರಂತ ವ್ಯಕ್ತಿಗತವಾದ ಹಾಗೂ ಸಮೂಹಧರ್ಮದ ಚೌಕಟ್ಟಿನಲ್ಲಿ ಗಳಿಸಿಕೊಳ್ಳಬಹುದಾದ ಜೀವನಸಾಫಲ್ಯ ವಂಶಗೌರವದ ಚಿಂತನೆ ಇವೆಲ್ಲವುಗಳ ನಡುವೆ ಮೂಡಿಬರುವ ಸಂಕೀರ್ಣದೆಣಿಗೆಯುಳ್ಳ ಸ್ತ್ರೀ ಪಾತ್ರದ ಮೂಲಕ ಕೌಟುಂಬಿಕ ಮೌಲ್ಯಗಳನ್ನೆ ಕವಿ ನಿರೂಪಿಸಿದ್ದಾರೆ.

ಹೆಣ್ಣು ಕಥನಕವನವು ಮತ್ತೊಂದು ದುರಂತ ಗೀತ.

ಹೆಣ್ಣೇ ಆಕೆಯ ಹೆಸರಾಗಿ ಕಥನ ಕವನದುದ್ದಕ್ಕೂ ಮೂಡಿದೆ. ಮಾರ ಯುದ್ಧದಲ್ಲಿ ಮಡಿದಾಗ ಹೆಣ್ಣು

ಉಸಿರಿನಲ್ಲಿ ಬಿರುಗಾಳಿಯ
ಹೊತ್ತು ತಡೆದು ನಿಲಿಸಿದಾಕೆ,
ಮಾತಿನಲ್ಲಿ ಸಿಡಿಲ ಮುಚ್ಚಿ,
ಸಾಕಿ ಸಾಧು ಮಾಡಿದಾಕೆ.

ಈ ಸಾಲು ಆಕೆಯ ಗುಣವನ್ನು ಧ್ವನಿಸುತ್ತದೆ. ನೋವಿನ ಸಂದರ್ಭದಲ್ಲೂ ಆಕೆ ತೋರಿದ ಸ್ಥೈರ್ಯ ಗಮನಾರ್ಹ. ಭಾವನೆಗಳ ಎತ್ತರವನ್ನು ಬದುಕಿನ ಸಂದರ್ಭದಲ್ಲಿ ಸಾಧಿಸಲಾಗದ ವಿಷಾದವೇ ಇಲ್ಲಿ ಕೊರಗಾಗಿ ಪ್ರಕಟಗೊಳ್ಳುತ್ತದೆ. ಕಥನಕವನದ ಅನೇಕ ಸಾಲುಗಳಲ್ಲಿ ಈ ವಿಷಾದ ಮಡುಗಟ್ಟಿರುವುದನ್ನು ಗುರುತಿಸಬಹುದು. ಹೃದಯದಲ್ಲಿ ಮೂಡುವ ಮಹತ್ವದ ಭಾವಗಳು ರೂಪ ತಾಳಲಾರದೆ, ಅಂದರೆ ಅವು ಕಾರ್ಯರೂಪಕ್ಕೆ ತರಲಾಗದಂತೆ ಹೊಕ್ಕಿ ಹಂಬಲಗಳೆಲ್ಲಾ ಮಣ್ಣು ಗೂಡಿದಂತಾದಾಗ ಅಲ್ಲಿ ಕಂಬನಿಯಷ್ಟೇ ಪರ್ಯಾಯವಾಗುವುದು ವಿಪರ್ಯಾಸವೂ ಹೌದು.

ಹಣೆಯ ಬೊಟ್ಟಿನೊಡನೆ ಭಾಗ್ಯ
ಅಳಿಸಿಹೋದ ಗಳಿಗೆಯಿಂದ,
ತಾಯಿ ತಂದೆಯಾಗಿ ಮಗನ
ಬಳಸಿ ನಿಂತೆ ಮೋಹದಿಂದ

ಹೆಣ್ಣು, ಹದ್ದು, ಗಿಡುಗ – ಚಿಂತೆ
ಕೋಟಿಯಾಗಿ ಕಾವಲಿರುತೆ
ಮರಿಯ ಪೊರೆವುದೆನಲು ಮನುಜೆ
ಇವಳಿಗುಂಟೆ ಬೇರೆ ಚರಿತೆ ?

ತನ್ನತನವನ್ನು ರಕ್ಷಿಸಿಗೊಳ್ಳುವ ಆತ್ಮಬಲ ಈ ಹೆಣ್ಣಿಗಿದೆ. ಅಸಹಾಯಕಳಾದರೂ ತಿಮ್ಮಗೌಡನ ಮೋಸಕ್ಕೆ ಬಲಿಯಾಗದವಳು –

ಗೌಡನವನ ಸೃಷ್ಟಿಯಲ್ಲಿ
ರಾತ್ರಿಯಲ್ಲಿ ಹಗಲೆಯಿಲ್ಲ,
ಬೆಳಗುಬೈಗು ಬೇರೆಯಿಲ್ಲ
ಸೂರ್ಯ ಚಂದ್ರಗತಿಗಳಿಲ್ಲ
ಮಾಸದವಧಿ ಯೊಂದೆ ಕಾಲ !
ಮೂಡು ಗೆಲವು ಪಡುವೆ ಸಓಲ
ಕಣ್ಣು ತೆರೆದು ನೋಡೆ ದೇವಿ
ಅಲ್ಲೆ ಸೂರ್ಯಚಂದ್ರರೆಲ್ಲ

ಈ ರೀತಿ ಹಗಲು ರಾತ್ರಿ ಎನ್ನದೆ ಹೆಣ್ಣಿನ ಮೋಹಕ್ಕೆ ಒಳಗಾದ ಗೌಡ, ಮಾರನ ವಿರುದ್ಧ ವ್ಯಕ್ತಿತ್ವದ ಸ್ವಭಾವಿ. ಪ್ರೀತಿ ಎನ್ನುವುದು ಬಲಾತ್ಕಾರದಿಂದ, ಒತ್ತಾಯಪೂರ್ವಕವಾಗಿ ಮೂಡಲಾರದು ಎನ್ನುವ ಸತ್ವವನ್ನು ತಿಳಿಯಲಾರದವನು.

ತಾನೆ ತನ್ನ ಕಳ್ಳನಾಗಿ
ತನ್ನೊಡವೆಯನೊಯ್ಯುವಂತೆ
ತಾನೆ ತುಬ್ಬುಗೊಂಡ ಮೇಲೆ
ತನ್ನ ತಾನೆ ಹೊಯ್ಯುವಂತೆ,
ಮೊರೆತಳೆಂದು ಹಿಗ್ಗುತ್ತಿದ್ದ
ದೊರೆಯಳೆಂದು ಹಲುಬುತಿದ್ದ
ಎರಡೆಣಿಕೆಯ ತಪ್ಪನೆಣಿಸಿ
ಕರಗುತ್ತಿದ್ದ ಕೊರಗುತ್ತಿದ್ದ.

ಆತನ ತಂತ್ರಗಳೆಲ್ಲ ಹೆಣ್ಣಿನ ಸಂಕಲ್ಪ ಶಕ್ತಿಯೆದುರು ವಿಫಲವಾಗುತ್ತದೆ. ಆಸೆಯಿಂದ ಹೋದ ಗೌಡನಿಗೆ ಅಲ್ಲಿ ಆಕೆ ಕಾಣಿಸದಾಗಿ ಭಣಗುಟ್ಟುವ ಶೂನ್ಯದಲ್ಲಿ ಆತನ ಸ್ವರ ಆತನ ಕಿವಿಗೇ ಬಡಿದು ಭಯದಿಂದ ನಿರ್ಜೀವನಾಗಿ ಸಾವಿನ ಪರಿಣಾಮವನ್ನು ಅನುಭವಿಸುತ್ತಾನೆ [೩].

ಬಹಳಸಲ ಬದುಕಿನಲ್ಲಿ ಸಂಬಂಧಗಳೂ ಸ್ವಾರ್ಥದ ಬೆನ್ನು ಹತ್ತಿ ಭಾವನೆಗಳೇ ವ್ಯವಹಾರಗಳಾಗಿ ಬಿಡುವ ವಿಪರ್ಯಾಸದ ಸುಗತಿಯನ್ನು ಕವಿ ಅನೇಕ ಬಾರಿ ಪ್ರಸ್ತಾಪಿಸುತ್ತಾರೆ.

ಕಥನಕವನಗಳ ಮೂಲಕ ಬದುಕಿನ ಬೇರೆ ಬೇರೆ ಮಗ್ಗಲುಗಳನ್ನು ಪರಿಚಯಿಸುವ ಕವಿ ವ್ಯಕ್ತಿತ್ವದ ವಿಶ್ಲೇಷಣೆಗೆ ತೊಡಗುತ್ತಾರೆ. ಹೆಣ್ಣಿನ ತುಮುಲಗಳನ್ನು ಅವಳ ಮೌಲ್ಯವನ್ನು ಚಿತ್ರಿಸುತ್ತಾ ಆ ಮೂಲಕ ಸತ್ಯದ ಮುಖವಾಡವನ್ನು ಒಡಕ್ಕಿಡಲು ಪ್ರಯತ್ನಿಸುತ್ತಾರೆ. ಹೆಣ್ಣಿನ ಪಾತ್ರದ ಮೂಲಕ ಬದುಕಿನ ಭ್ರಮೆ ಮತ್ತು ವಾಸ್ತವದ ನಡುವಿನ ಸತ್ಯವನ್ನು ಕುರಿತು ವಿವರಿಸುತ್ತಾರೆ. ಕಥನಕವನದಲ್ಲಿ ನಡೆಯುವ ಒಂದೊಂದು ಘಟನೆಯೂ ವಿಸ್ತಾರವಾದ ಬದುಕಿನ ಒಂದೊಂದೇ ಬಗೆಯ ಆಯಾಮವನ್ನು ತೆರೆದು ನೋಡುವ ಪ್ರಾಮಾಣಿಕ ಪ್ರಯತ್ನವೆಂದರೂ ತಪ್ಪಾಗಲಾರದು.

ಸೀತೆಯಂದೂ ; ತಾರೆಯೆಂದು
ಗುಡಿಯೊಳಿಟ್ಟು ಕರೆದರಿಲ್ಲ
ಶಿಲ್ಪಕಲೆಯ – ಚಿತ್ರ ಕೃತಿಯ
ಮೈಯ ಕೈಯ ಬರದರಿಲ್ಲ
ಅವಳ ಮೂಳೆ ಬದ್ಧ ನೆಲದಿ
ಮಣ್ಣ ದೂಪೆಯೇಳಲಿಲ್ಲ

ಕಲ್ಲೋ ಮುಳ್ಳೋ ಅವುದಿರಲಿ
ಅವಳ ಹೆಸರೆ ಹೇಳಲಿಲ್ಲ

ಕಥನಕವನದ ಈ ಭಾಗದಲ್ಲಿ ಹೆಣ್ಣನ್ನು ಸಾಂಪ್ರದಾಯಿಕ ನಿಲುಪಿನಲ್ಲಿ ನೋಡಲಾಗಿದೆ. ಹೆಣ್ಣಿನ ಪಾವಿತ್ರ್ಯದ ಕಲ್ಪನೆ ಬದಲಾಗಿ ಕುಟುಂಬವೆಂಬುದು ಅವಳಿಗೆ ಆಯ್ಕೆಯ ಪ್ರಶ್ನೆಯಾಗಬೇಕು.

ಹೆಣ್ಣನ್ನು ಕುಟುಂಬದಲ್ಲಿ ಹೇಗೆ ನೋಡಲಾಗುತ್ತಿದೆ ಎಂಬುದನ್ನು ಈ ಕಥನಕವನವು ಸಶಕ್ತವಾಗಿ ಹೇಳುತ್ತದೆ. ಕಥನಕವನದಲ್ಲಿ ವಿಷಾದವಿದೆ. ಸಮಾನತೆ ಸಾಧ್ಯವಾಗದಿರುವ ಬಗ್ಗೆ ಖೇದವಿದೆ. ಹೆಣ್ಣಿನ ಪಾರತಂತ್ರ್ಯ ಪರಿಸ್ಥಿತಿಯ ಬಗ್ಗೆ ಈ ಕಥನಕವನವು ಸಶಕ್ತವಾದ ಅಭಿಪ್ರಾಯ ಮೂಡಿಸಿದೆ.

ಕಡೆಂಗೋಡ್ಲು ಶಂಕರ ಭಟ್ಟರ ಅಪೂರ್ವ ಕಥನಕವನಗಳಲ್ಲಿ "ಭೂತಾಳ ಪಾಂಡ್ಯ" ಕೂಡಾ ಅಮೂಲ್ಯವಾದದ್ದು. ಪಶ್ಚಿಮ ಕರಾವಳಿಯಲ್ಲಿ ಪ್ರಚಲಿತವಿರುವ ಮಾತೃರೂಪಿ ಸಂಸ್ಕೃತಿಗೆ ಭೂತಾಳ ಪಾಂಡ್ಯನ ಕಟ್ಟು ಕಾರಣವೆಂದು ಹೇಳಲಾಗುತ್ತದೆ. ಕೌಟುಂಬಿಕ ಮೌಲ್ಯದ ಆಧಾರದಲ್ಲೇ ಈ ಕಥನಕವನ ರಚನೆಗೊಂಡಿದೆ.

ದೇವ ಪಾಂಡ್ಯ/ಭೂತಾಳ ಪಾಂಡ್ಯ ಕಡಲ ವ್ಯಾಪಾರಕ್ಕೆಂದು ಕಟ್ಟಿಸಿದ ಹೊಸ ಹಡಗನ್ನು ನೀರಿಗಿಳಿಸುವ ಸಂದರ್ಭ ಕುಂಡೋದರ ಭೂತ ಕಾಣಿಸಿಕೊಂಡು ನರಬಲಿ ಕೊಡದೆ ಹಡಗನ್ನು ಬಿಡಲಾರೆ ಎನ್ನುತ್ತದೆ.

ದೇವಪಾಂಡ್ಯ ತನ್ನ ಏಳು ಮಂದಿ ಮಕ್ಕಳಲ್ಲಿ ಒಬ್ಬನನ್ನು ಬಲಿಕೊಡುವಂತೆ ಹೆಂಡತಿಯನ್ನು ಕೇಳುತ್ತಾನೆ. ಅದನ್ನು ನಿರಾಕರಿಸಿದ ಅವಳು ಜತಜವರು ಮನೆಗೆ ತೆರಳುತ್ತಾಳೆ. ಇದರಿಮದ ದುಃಖಿತನಾದ ಅಣ್ಣನನ್ನು ಕಾಣಲು ತಂಗಿ ಸತ್ಯವತಿ ಬರುತ್ತಾಳೆ. ತನ್ನ ಮಗ ಜಯನನ್ನು ಬಲಿಕೊಡಲು ಮುಂದಾಗುತ್ತಾಳೆ. ಜಯ ಪಾಂಡ್ಯನ ಬಲಿಗೆ ಎಲ್ಲಾ ಸಿದ್ಧತೆಯಾದಾಗ ಕುಂಡೋದರ ಭೂತ ಕಾಣಿಸಿಕೊಂಡು ಈತ ನನ್ನ ಆರಾಧಕ. ಭೂತಾಳ ಪಾಂಡ್ಯನ ವಂಶದ, ಇವನ ಬಲಿ ಬೇಡ, ಹಡಗನ್ನು ನೀರಿಗಿಳಿಸಬಹುದು ಎಂದಿತು. ಮುಂದೆ ಭೂತಾಳ ಪಾಂಡ್ಯನ ಸಂಪತ್ತಿಗೆ ಆತನ ಮಕ್ಕಳು ಬಾಧ್ಯಸ್ಥರಲ್ಲವೆಂದೂ ಅವೆಲ್ಲಕ್ಕೂ ಸೋದರಳಿಯ ಜಯ ಪಾಂಡ್ಯನು ಹಕ್ಕುದಾರನೆಂದೂ ಘೋಷಿಸಲಾಯಿತು.

ಈ ರೀತಿಯ ಕೌಟುಂಬಿಕ ವ್ಯವಸ್ಥೆಯ ಮೂಲ ಕಥೆಯೇ ಪ್ರಸ್ತುತ ತುಳುನಾಡಿನ ಅಳಿಯ ಕಟ್ಟು.

ಎನಗೊಂದು ನರಬಲಿ ಕೊಡದೆ
ಹಡಗನೆತ್ತಿತ್ತ ಕದಲಿಸಿದನಾದರೆ
ಘೋರ ಸಂಕಟದಿ ಸಿಲುಕುವನು ಎಂದು

ಕುಂಡೋದರ ದೈವವು ಜ್ಯೋತಿಷಿಯ ಕವಡೆಯ ಪ್ರಶ್ನೆಯಲ್ಲಿ ತಿಳಿಸಿಕೊಡುತ್ತದೆ. ಆಘಾತಗೊಮಡ ದೇವ ಪಾಂಡ್ಯ ಬಲಿದಾನಕ್ಕೆ ಮಾನಸಿಕವಾಗಿ ಸಿದ್ಧವಾಗುವ ಸನ್ನಿವೇಶ ಕೌಟುಂಬಿಕ ಹಿನ್ನೆಲೆಯಲ್ಲಿ ನಡೆಯುತ್ತದೆ.

ಹೊಸ್ತಿಲೆಡೆಯಲಿ ನಿಂತು ತನ್ನ ಹೃದಯಸ್ವಾಮಿ
ಇತ್ತ ಬರುವನೋ ಎಂದು ಪರಿಕಿರಿಸುವ ಹಿದಿಬದೆಯ
ತೆರದಿಂದೆ ಚಿತ್ತವದು ನಿಮ್ಮದೇ ನೆನೆನೆನೆದು
ನಮ್ಮ ಕಡಲಿನ ದಡದವರೆಗೆ ಚಾಚುತೆ ನಿಮ್ಮ
ದೂರದೇಶದ ಕಡೆಗೆ ನೋಟವನ್ನು ಬೀರಿತ್ತು.
ಇರುಳಿಡೀ ಅರೆ ನಿದ್ದೆ ; ನಿದ್ದೆಯಿರೆ ಕೆಡುಗನಸು
ಎಚ್ಚರಲಿ ಕುದಿಕುದಿವ ನಿಮ್ಮ ಸೌಖ್ಯದ ಚಿಂತೆ
ಅದಕಡ್ಡಿ ಬರಲಿಲ್ಲ ಇದುವೆ ನಮ್ಮಯ ಭಾಗ್ಯ !

ಎಂದು ಪತಿಯ ನಿರೀಕ್ಷೆಯಲ್ಲಿದ್ದ ಪತ್ನಿ ತನ್ನ ದುಗುಡವನ್ನು ಅರುಹುತ್ತಾಳೆ.

ಆದರೆ ಅದೇ ಪತ್ನಿ ದೈವವು ಬಲಿಯನ್ನು ಅಪೇಕ್ಷಿಸುತ್ತದೆ. ಅದಕ್ಕಾಗಿ ತನ್ನ ಏಳು ಮಕ್ಕಳಲ್ಲಿ ಒಬ್ಬನನ್ನು ಬಲಿಕೊಡಬೇಕೆಂದು ಹೇಳಿದಾಗ ಪತ್ನಿ ಒಪ್ಪುವುದಿಲ್ಲ.

ಭೂತಗಳೆ ನರಬಲಿಯ ಬಯಸುತಿಹವೆನ್ನುವೆನೆ ?
ಸಂಸಾರವೆಂಬುದಿದೆ ಪೃಥುಲ ಬಲಿವೇದಿಕೆಯಲಿ !
ತಂದೆ ಮಕ್ಕಳಿಗಾಗಿ, ಹೆಣ್ಣು ಪುರುಷನಿಗಾಗಿ
ಬಂಧು ಬಂಧುವಿಗಾಗಿ ದೇಹವನು ಸವೆಯಿಸರೆ ?

ಈ ರೀತಿ ಜೋಯಿಸರ ಮಾತನ್ನು ನಿರಾಕರಿಸಿ ತಟಸ್ಥಳಾಗಲು ರಾಜನ ಮನಸ್ಸು ಒಪ್ಪಲಿಲ್ಲ. ಕಾರಣ ಸಮಷ್ಟಿಯ ಹಿತಕ್ಕಾಗಿ ವ್ಯಕ್ತಿಯ ಬಲಿ ೪.

ಹಿರಿಯ ಲಾಭವ ಪಡೆಯ
ಕಿರಿಯನಷ್ಟವ ಸಹಿಸಬೇಕು ; ಒಣಗೆಲೆಯುದಿರೆ
ಚಿಗುರುಗಳು ಹಸನಾಗಿ ಬೆಳೆಯುವುವು ನಲಿಯುವುವು

ದೇವ ಪಾಂಡ್ಯ ತನ್ನ ಆತ್ಮಾಹುತಿಯ ಸಮರ್ಥನೆಗಾಗಿ, ನೀಡುವ ರೂಪಕಗಳು ಆಕೆಗೆ ಒಪ್ಪಿತವಾಗಲಿಲ್ಲ.

ದೇವ ಪಾಂಡ್ಯನಾಡಿದ ಮಾತು
ಹೇಳು ಶಿವೆ । ನಿನ್ನ ನಲ್ಮೆಯ ನಲ್ಲನಿಗೆ ತೋರ್ಪ
ದಾರಿಯಾವುದು ಹೇಳು ! ಅವಾವ ಶಾಸ್ತ್ರಗಳು
ಜೀವನವನಾವರಿಪ ಸಾವೆಂಬ ಸಿಪ್ಪೆಯನು
ಸುಲಿದತ್ತ ಬಿಸುಡಲಿಹ ದಾರಿಯನು ತಿಳಿಸಿಲ್ಲ
ಹುಟ್ಟು ಜೀವದ ಹುಟ್ಟೆ ? ದ್ರುತಿಯ ಹುಟ್ಟಲ್ಲವೆ ?
ಸಾವು ಹುಟ್ಟುಗಳೆರಡರ ಕೊಂದೆ ತೊಟ್ಟಲ್ಲವೆ ?
ಒಂದ ನಿನ್ನೊಂದೊಳಗೆ ತಾನೇ ತೊಟ್ಟಿಲ್ಲವೆ ?
ಎಂದರ ಬೆಸುಗೆಯೆಂತು ! ನಮಗೆ ಗಲುಟ್ಟಿಲ್ಲವೆ ?

ಪಾಂಡ್ಯ ಹೆಣೆದ ಬದುಕು ಸಾವಿನ ಮೀಮಾಂಸೆ ಶಿವಗೆ ಅರ್ಥವಿಲ್ಲದ ಶಬ್ದ ಓಲಗಗಳಾದವು.

ಏನು ನುಡಿ । ಏನು ಬಗೆ । ಎಂತಿರುವ ಹುಸಿಯಧಗೆ ।
ಅರ್ಥವಿಲ್ಲದೆ ನೆಯ್ದು ಶಬ್ದ ಜಾಲಗಳೇನು?
ಭಾವವನು ಮುಚ್ಚಿಡುವಲಂಕಾರ ರಚನೆಗಳ
ರೀವಿಯೇನಿದು? ಸುಳ್ಳು ! ಕುಂಡೋದರನ ಮಾತು
ಆಗಸದೊಳೆರಚಿರುವ ಮುಗಿಲ ಚೂರುಗಳೊಮ್ಮೆ
ಹುಲಿಗೆ ಸಮವಾಗುವುದು ಹುಲ್ಲೆಯನೆ ತೋರುವುದು.
ಮರುಳರಾ ನಾವಿಕರು ಲಂಚಗುಳಿ ಜೋಯಿಸರ
ಮಾವ ಕಿವಿಯಲಿ ಹಾಕಿ ಮರುಳರೆಂದೆನಿಸುವೆ?

ಅರಸನ ಮಾತುಗಳೆಲ್ಲವೂ ಕೂಡಾ ಭಾವವನ್ನು ಮುಚ್ಚಿಡುವ ಅಲಂಕಾರ ರಚನೆಗಳ ರೀವಿಯಾಗಿ ಕಾಣಿಸಿತು. ಲಂಚಗುಳಿ ಜೋಯಿಸರ ಮಾತ ಕಿವಿಯಲ್ಲಿ ಹಾಕಿ ನಾವೂ ಮರುಳಾಗುವುದೇ ಎಂದು ಎದುರು ಪ್ರಶ್ನೆ ಹಾಕುವಳು.

ದೈವ ಹಾಗೂ ಪುರುಷನ ಪ್ರಶ್ನೆ ಬಂದಾಗ ಮರುಳು ದೆವ್ವಗಳ ಹೆಡತಲೆಯ, ಹೊತ್ತಳ ತುಳಿದು ಪಾತಾಳ ಕಳಿಸಬೇಕು" ಎಂಬ ನಿಲುವು ಅವಳದು. ಆ ಕಾರಣಕ್ಕಾಗಿ ಅವಳು ಹೀಗೆನ್ನುತ್ತಾಳೆ

ದೈವವನೆ ದೈವದೊಳೆ ವಿಶ್ವಾಸವಿಡಬೇಕು
ಅದರ ಸಾಮ್ರಾಜ್ಯವನು ನಾವೊಪ್ಪಿಕೊಳ್ಳಬೇಕು
ಬರುವುದೆಲ್ಲವು ಬರಲಿ ಎಂದು ಬಳಿತರಬೇಕು
ಬಾಳ ಬಿಡುವನು ದೈವ ವಿಶ್ವಾಸವಿರದವನು
ಪುರುಷಕಾರವೆನಚ್ಚೆ ಪುರುಷನಂತಿರಬೇಕು
ಮರುಳು ದೆವ್ವಗಳ ಹೆಡತಲೆಯ ತೊತ್ತಳ ತುಳಿದು
ಪಾತಾಳಕ್ಕಿಳಿಸ ಬೇಗಲ್ಲದೆ । ಬೇರೊಂದು
ರೀತಿಯನು ತಿಳಿಸು ನಿಮ್ಮಯ ಹದನನರಿಯ

ದೇವ ಪಾಂಡ್ಯನ ಪತ್ನಿಗಿಲ್ಲಿ ವೈಚಾರಿಕತೆಯಿದೆ. ತಮ್ಮನ್ನು ತಾವೆ ಬಲಿಗೊಟ್ಟು ಕುಟುಂಬದ ಜವಾಬ್ದಾರಿಯಿಂದ ಜಾರಿಕೊಳ್ಳುವುದನ್ನು ಶಿವೆ ಕುಂಡೋದರನ ಭಾಗ್ಯವೆನ್ನುತ್ತಾಳೆ.

ಹಲವರ ಹಿತಕ್ಕಾಗಿ ತನ್ನನ್ನು ಬಲಿಕೊಡುವ ಮೂಲಕ ತನ್ನವರನ್ನು ಅನಾಥರನ್ನಾಗಿಸುವ ಪಾಂಡ್ಯನ ಔದಾರ್ಯವನ್ನು ಆಕೆ ಪ್ರಶ್ನಿಸುತ್ತಾಳೆ. ಕೌಟುಂಬಿಕ ಮೌಲ್ಯವನ್ನು ಈ ಸನ್ನಿವೇಶದಲ್ಲಿ ಕಥನಕವನದ ಮೂಲಕ ಕವಿ ಚೆನ್ನಾಗಿ ಪ್ರತಿಪಾದಿಸಿದ್ದಾರೆ.

ಹುಲುಮಂದಿಯೊಬ್ಬನನ್ನು ಬಲಿಕೊಟ್ಟು ಕುಂಡೋದರನ ನೇಮವನ್ನು ಸಲ್ಲಿಸುವಂತೆ ಒತ್ತಾಯಿಸುತ್ತಾಳೆ. ಯಾಕೆಂದರೆ ಕುಟುಂಬ ವ್ಯವಸ್ಥೆಯಲ್ಲಿ ಹೆಣ್ಣಿನ ಪಾತ್ರ ಮಹತ್ವದ್ದು ಎನ್ನುವುದನ್ನು ಈ ಸಾಲು ಅರ್ಥಪೂರ್ಣವಾಗಿ ಧ್ವನಿಸುತ್ತದೆ.

"ಸ್ತ್ರೀ ಸಂದರ್ಭದಲ್ಲಿ ವಿವಾಹ ಹಾಗೂ ಕುಟುಂಬ ಸಂಸ್ಥೆಗಳು ಅವಳನ್ನು ಸಂಪೂರ್ಣವಾಗಿ ವ್ಯಾಪಿಸಿರುವುದಾಗಿದೆ. ಆಕೆಯ ಜೀವನದ ಎಲ್ಲಾ ವಿಚಾರಗಳು ಒಂದಲ್ಲ ಒಂದು ಬಗೆಯಲ್ಲಿ ಇದರೊಂದಿಗೆ ಥಳುಕು ಹಾಕಿಕೊಂಡಿರುತ್ತದೆ". ಎನ್ನುವ ಡಾ.ಎಂ. ಉಷಾ ಅವರ ಮಾತು ಮನನೀಯ. [೫]

ಕೌಟುಂಬಿಕ ಹಿನ್ನೆಲೆಯಿಂದ ಅವಲೋಕಿಸಿದಾಗ ಹೆಣ್ಣಿಗೆ ಮುಂದಾಲೋಚನೆ ಗಂಡಿಗಿಂತ ತೀವ್ರವಾಗಿದೆ ಎನ್ನುವುದನ್ನು ತಿಳಿಯಬಹುದು.

ದೊರೆ ಭೂತಾಳ ಪಾಂಡ್ಯ ಸಾವಿಗೆ ಅತಿಥಿಯಾಗಲಿರುವನೆಂದು ಕೇಳಿದ ಬಾರ್ಕೂರ ನಗರಿಯ ಜನರ ವಿಭಿನ್ನ ಪ್ರತಿಕ್ರಿಯೆ ಕಾವ್ಯದ ಮೂರನೆ ಭಾಗದ ಇಪ್ಪತ್ತಮೂರು ಸೊಲ್ಲುಗಳಲ್ಲಿ ವಿಸ್ತರಿಸಿದೆ.

ಅದೇ ರೀತಿ ಪಾಂಡ್ಯನ ಸೋದರಿಯ ಮನೆಯೊಳಗೂ ಶೂನ್ಯತೆಯು ಹಬ್ಬಿದೆ. ಕೌಟುಂಬಿಕ ಬಂಧವೆಂದರೆ ಇದೇ. ಇದುವೇ ರಕ್ತಸಂಬಂಧದ ಮಹತ್ವವೂ ಹೌದು. ಅದೇ ರೀತಿ ಸೋದರ ವಾತ್ಸಲ್ಯದ ಪ್ರತಿಮೆಯೂ ಹೌದು.

ಎಸಳುದುರೆ ಮೂಗಾಗಿ ಬಾಗಿರುವ ಹೂವಂತೆ
ಅವಳ ಮನೆ ನಿಶ್ಯಬ್ದವಾಗಿ ಮೂಗಾಗಿಹುದು.

ಅಣ್ಣ ಪಾಂಡ್ಯನ ಅಳಿವಿಗೆ ಕಳವಳಿಸಿದ ಸತ್ಯವತಿ, ಅಣ್ಣನ ಬದಲು ಬೇರೊಂದು ಬಲಿಯ ಕೊಡಬೇಕು. ಆತ ಉಳಿಯಬೇಕೆಂಬ ತೀರ್ಮಾನಕ್ಕೆ ಬಂದು ತನ್ನ ಮಗ ಜಯನನ್ನು ಬಲಿಗೆ ಅಣಿಗೊಳಿಸುತ್ತಾಳೆ.

ಈಕೆ ತನ್ನ ಕುಟುಂಬದ ಮೇಲಿನ ಮಮತೆಯನ್ನು ಮರೆಯಲಿಲ್ಲ "ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ" ಎಂಬ ನುಡಿಯನ್ನು ಬದಲಿಸುವ ಧ್ಯೇಯ, ಔದಾರ್ಯ ತೋರಿದಾಕೆ ಸತ್ಯವತಿ. ತನ್ನ ಅಣ್ಣನ ಉಳಿವಿಗಾಗಿ ತನ್ನ ಮಗನನ್ನೇ ಬಲಿಕೊಡುವ ಅವಳ ನಿರ್ಧಾರ ಕೌಟುಂಬಿಕ ಮೌಲ್ಯವನ್ನೆ ಚೆನ್ನಾಗಿ ಪ್ರತಿಪಾದಿಸುತ್ತದೆ.

ಭೂಮಿಯೇ ! ಮುನ್ನೀರೆ ! ಆಗಸವೇ ? ತಂಗಾಳಿ !
ನೇಸರ ಕೇಳಿ ! ಒಡಲಿಹುದು ನಿಮ್ಮದಾಗಿಹುದು
ನಿಮ್ಮ ಪಾಲನು ಕೊಳ್ಳಿ ! ಜಯನೆಂಬ ನಾಮವನು
ಲೋಕದಿಂದ ತಳ್ಳಿ ! ಎನ್ನ ಭಕ್ತಿಯ ಕೊಳ್ಳಿ
ಕದ್ದು ತಾರದ ಒಡಲ ಕೇಳಲಾರೆ ! ಕೊಡುವುದಕೆ
ಅಳಲಾರೆ ! ನಿಮ್ಮ ಕೈಗಳ ಕಲಾಕೃತಿಯದಕೆ
ಕೊಲೆಗೊಳಿಸಲಾರೆ ! ತಾಯನಿಂತಿರುವ
ಮಾತುಲನ ಕೊಟ್ಟದಕೆ ಕೈಮುಗಿಯದಿರಲಾರೆ

ದೇವಪಾಂಡ್ಯನ ತಂಗಿ ಸತ್ಯವತಿ ತನ್ನ ಅಣ್ಣನ ಉಳಿವಿಗಾಗಿ ತನ್ನ ಮಗ ಜಯನನ್ನು ಆತ್ಮಾರ್ಪಣೆಗಾಗಿ ನಡೆಸಿದ ಸಂಚು ಯಾರಿಗೂ ತಿಳಿಯಲಿಲ್ಲ. ಸತ್ಯವನ್ನು ಮುಚ್ಚಿಡಲು ಯಾರಿಗೂ ಸಾಧ್ಯವಿಲ್ಲ. ಅದು ತನ್ನದೇ ಆದ ರೀತಿಯಲ್ಲಿ ಪ್ರಕಟಗೊಳ್ಳುತ್ತದೆ, ಎಂಬ ಮಾತಿನಂತೆ ಕುಟುಂಬ ಗೃಹ ರಾಜ್ಯದ ಪ್ರೀತಿ

ಸಿಂಹಾಸನದಲ್ಲಿ ಮಂಡಿಸಿದ ಅಣ್ಣನ ನೆಲೆ ಶೂನ್ಯವಾಗುವುದು ಸತ್ಯವತಿಗೆ ಇಷ್ಟವಿಲ್ಲ. ನಮ್ಮ ಬಳಗದ ತಬ್ಬಲಿಯ ಮಾಡಿ ನೀನಿಂದು ಹೋಗಬಾರದು ತಂದೆ . . . . ಮರುಳು ನಂಬಿಕೆಯ ಸಲಿಸಲೆ ಕಿರಿಯ ಜೀವಿಗಳಿಹವು ಒಲಿವು ಜೀವಿಗಳಿರುವು ಎನ್ನುವಲ್ಲಿ ಕರಾವಳಿಯ ಮಾತೃರೂಪಿ ಸಂಸ್ಕೃತಿಯ ಪ್ರತಿನಿಧೀಕರಣವನ್ನು ಗುರುತಿಸಬಹುದಾಗಿದೆ [೬].

ಈ ರೀತಿಯ ಕೌಟುಂಬಿಕ ಮೌಲ್ಯಗಳನ್ನು ಅತ್ಯಂತ ಧ್ವನಿಪೂರ್ಣವಾಗಿ ಕಥನಕವನಗಳಲ್ಲಿ ಕವಿ ನಿರೂಪಿಸಿದ್ದಾರೆ. ಇದರೊಂದಿಗೆ ಬದುಕಿನ ಹಲವು ಮಗ್ಗಲುಗಳ ಪರಿಚಯವನ್ನು ನೀಡಿ ಒಂದೆಡೆ ಸುಂದರ ಜಿವನ ಇನ್ನೊಂದೆಡೆ ಸಾವಿನ ಸಾಕಾರ. ಇವೆರಡನ್ನು ತಂದು ಬದುಕಿನ ಸುಖ–ದುಃಖಗಳ ಚಿತ್ರವನ್ನು ಒಟ್ಟಾಗಿ ಕೊಡುತ್ತಾರೆ. ಬದುಕು ಮತ್ತು ಸಾವು ಸುಖ ಮತ್ತು ದುಃಖಗಳನ್ನು ಮುಖಾಮುಖಿಯಾಗಿಸಿ ಕಥನಕವನಗಳಿಗೆ ಮಹತ್ವವನ್ನು ತಂದುಕೊಟ್ಟಿದ್ದಾರೆ.

ಈ ಜೀವನ ವಿಧಾನವೇ ಒಂದು ಆಟವೆಂಬ ನಿಲುವು ಕವಿ ಕಡೆಂಗೋಡ್ಲು ಶಂಕರಭಟ್ಟರದ್ದು. ಬದುಕಿನ ಸಾಮರಸ್ಯವನ್ನು ಅದರ ಮಿತಿಗಳೊಂದಿಗೆ ಅನುಭವಕ್ಕೆ ತಾಕಿಸುವ ಪ್ರಯತ್ನವನ್ನು ಗಮನಾರ್ಹ.

ತಂಗಿ ಸತ್ಯವತಿ ತೋರಿದ ವಾತ್ಸಲ್ಯದಿಂದ ದೇವ ಪಾಂಡ್ಯನ ಬಾಳಿನ ಇರುಳು ಕಳೆಯುತ್ತದೆ. ಬೆಳಕಿನ ಹೊತ್ತು ಗೊತ್ತುಗಳು ಬೆಳಕಿಗಲ್ಲದೆ ಬೇರಾರಿಗೂ ತಿಳಿಯದು ಕತ್ತಲನ್ನು ನಾಶ ಮಾಡುವ ಹೊತ್ತೇ ಬೆಳಕಿನ ಹೊತ್ತು. ಅಂತಹ ಸಮಯ ಬಂದೇ ಬರುತ್ತದೆ. ಜಗತ್ತಿನ ಜೀವಿಗಳೆಲ್ಲ ಸಾವನ್ನು ಜಯಿಸಿ ಅಮರರಾಗುತ್ತಾರೆ. ಬೆಳಕನ್ನು ನೀಡಿ, ಬಾಳು ಬೆಳಗಿಸಿಕೊಂಡು ಬೆಳಕಾಗಿ ಬಾಳುತ್ತಾರೆ ಎಂದು ಆಶಿಸುವ ಕವಿ ದ್ರಷ್ಟಾರರಂತೆ ನಮಗಿಲ್ಲಿ ಭಾಸವಾಗುತ್ತಾರೆ.

ಕಥನಕವನಗಳಲ್ಲಿ ಕೌಟುಂಬಿಕ ಮೌಲ್ಯಗಳನ್ನು ಪ್ರತಿಪಾದಿಸುವ ಕವಿ ಆಶಾವಾದಿಯಾಗಿರುವುದು ಜಗತ್ತಿಗೆ ಇಂದಲ್ಲಾ ನಾಳೆ ಒಳಿತಾಗುವುದನ್ನು ನಂಬಿರುವುದು ಕಂಡುಬರುತ್ತದೆ. ನಿಜವಾದ ಅರ್ಥದಲ್ಲಿ ತ್ಯಾಗಗುಣ, ಜಗತ್ತಿನ ಜೀವಿಗಳಲ್ಲಿ ಮೂಡಿಬರಬೇಕೆಂದು ಕವಿಯ ಆಶಯ.

**ಕಡೆಂಗೋಡ್ಲು ಶಂಕರ ಭಟ್ಟರ ಕಥನ ಕವನಗಳಲ್ಲಿ ಮೂಡಿದ ಸಾಮಾಜಿಕ ಮೌಲ್ಯಗಳು, ಧಾರ್ಮಿಕ ಮೌಲ್ಯಗಳು :–**

ಕಡೆಂಗೋಡ್ಲು ಶಂಕರ ಭಟ್ಟರ ಕಥನಕವನಗಳು ಮೇಲುನೋಟಕ್ಕೆ ತುಂಬ ತೆಳುವಾಗಿ ಕಂಡುಬಂದರೂ ಅದರ ಒಳಗಿನ ಹೆಣಿಗೆಯಿಂದಾಗಿ ನಮ್ಮನ್ನು ಬೇರೆಬೇರೆ ದಿಕ್ಕುಗಳತ್ತ ಕರೆದೊಯ್ಯುತ್ತದೆ.

ಸಾಮಾಜಿಕ ಸ್ತರಗಳಲ್ಲಿ ಜೇಂದ್ರೆಯವರಿಗಿರುವ ಕಾಳಜಿ ಅವರ ಸಾಮಾಜಿಕ ಪದ್ಯಗಳಲ್ಲಿ ಕಾಣುವಂತೆ ಕಡೆಂಗೋಡ್ಲು ಶಂಕರ ಭಟ್ಟರ ಕಥನ ಕವನಗಳಲ್ಲೂ ಅವರ ಸಾಮಾಜಿಕ ಕಾಳಜಿ ಎದ್ದುಕಾಣುತ್ತದೆ.

ಕಥನಕವನಗಳನ್ನು ಸಾಮಾಜಿಕ, ಧಾರ್ಮಿಕ, ಕೌಟುಂಬಿಕ ವಿಷಯ-ಮೌಲ್ಯಗಳಿಗೆ ಸಂಬಂಧಿಸಿದ್ದೆಂದು ಸುಲಭದಲ್ಲಿ ವಿಂಗಡಿಸಲು ಸಾಧ್ಯವಿಲ್ಲ. ಯಾಕೆಂದರೆ ಎಲ್ಲಾ ಕಥನಕವನಗಳಲ್ಲೂ ಎಲ್ಲಾ ಅಂಶಗಳು ಹೆಣೆದುಕೊಂಡಿವೆ.

ನಾವು ಅಧ್ಯಯನದ ದೃಷ್ಟಿಯಿಂದ ಅನುಕೂಲವಾಗಲೆಂದು ಸ್ಥೂಲವಾಗಿ ವಿಂಗಡಿಸಬಹುದಷ್ಟೇ. ಆದರೆ ಅದು ಕೂಡಾ ಕೆಲವು ವೇಳೆ ಸಮರ್ಥಿಸಿಕೊಳ್ಳುವುದು ಕಷ್ಟವಾಗಬಹುದು.

ಸಾಮಾಜಿಕ ಮೌಲ್ಯಗಳು ಎಂದಾಕ್ಷಣ ಅದು ಮನುಷ್ಯನ ಸಮಾಜದ ನಡಾವಳಿಗೆ ಸಂಬಂಧಿಸಿದ್ದೆಂಬುದು ಅರ್ಥವಾಗುತ್ತದೆ[೭]. ಸಮಾಜದ ವರ್ಗ ಸಮಸ್ಯೆ, ವರ್ಣ ಸಮಸ್ಯೆ, ಧಾರ್ಮಿಕ ಸಮಸ್ಯೆಗಳಿಗೆಲ್ಲಾ ಕಥನಕವನಗಳು ಮುಖವಾಣಿಯಾಗುತ್ತವೆ.

ವ್ಯಕ್ತಿಯ ಸರ್ವತೋಮುಖ ವಿಕಾಸಕ್ಕೆ ಸಂಬಂಧಿಸಿದ ಅಡ್ಡಿ ಆತಂಕದ ಬಗೆಗೂ ಕವಿ ತನ್ನ ಚಿಂತನೆಯನ್ನು ಹರಿಸಬಹುದು. ಸಾಮಾಜಿಕ ವ್ಯಕ್ತಿಯಾಗಿ ಸಮಾಜದ ಹಿತವನ್ನು ಕಾಯ್ದುಕೊಳ್ಳಲು ಸಾಧ್ಯವಾಗದಿದ್ದಾಗ ಕೂಡಾ ಮೌಲ್ಯಗಳ ಕುಸಿತ ಸಮಾಜದಲ್ಲಿ ಕಂಡುಬರುತ್ತದೆ. ಇದರಿಂದ ತಿಳಿಯುವುದೇನೆಂದರೆ ಒಂದು ಸಮಾಜದ ಹಿತ ಸಾಮೂಹಿಕ ನಡಾವಳಿಗಳಲ್ಲಿರುತ್ತದೆ.

ಅದೆಷ್ಟೋ ಸಂದರ್ಭಗಳಲ್ಲಿ ಪ್ರಬುದ್ಧ ಚಿಂತಕರೆನಿಸಿಕೊಂಡವರು ತಮ್ಮ ತಾತ್ವಿಕ ಚಿಂತನೆಯ ಪರಿಣಾಮದ ಬಗ್ಗೆ ಆಶಾವಾದಿಗಳಾಗಿದ್ದು ಒಂದು ಸಮಾಜದ ಮೌಲ್ಯಗಳನ್ನು ಸಮೂಲವಾಗಿ ಬದಲಾಯಿಸುವ ಸಲುವಾಗಿ ನವ ವಿಚಾರಧಾರೆಗಳನ್ನು ತಮ್ಮ ಬರಹಗಳಲ್ಲಿ ಅಡಕ ಮಾಡಿಕೊಳ್ಳಬಹುದು.

ಈ ಸನ್ನಿವೇಶದಲ್ಲೂ ಸಾಮಾಜಿಕ ಒಡಂಬಡಿಕೆಗೆ ಧಕ್ಕೆಯೊದಗಿ ಸಮಾಜದ ಶಾಂತಿ ಅಪ್ಪರಮಟ್ಟಿಗೆ ಕದಡಿ ಹೋಗುತ್ತದೆ. ಹಾಗಾಗಿ ಒಬ್ಬ ಒಳ್ಳೆಯ ಕವಿಯಾದವನು ಸುವ್ಯವಸ್ಥಿತ ಆರೋಗ್ಯಪೂರ್ಣ ಸಮಾಜದ ಕನಸನ್ನು ಮನದಲ್ಲಿರಿಸಿ ಸಾಮಾಜಿಕ ಮೌಲ್ಯಗಳನ್ನು ಇಮ್ಮಡಿಗೊಳಿಸುವ ಧ್ಯೇಯದಿಂದ ಕೃತಿಗಳಲ್ಲಿ ಉದಾತ್ತ ಸಾಮಾಜಿಕ ಮೌಲ್ಯಗಳನ್ನು ಬಿಂಬಿಸುತ್ತಾನೆ.

ಮೊದಲೇ ಚರ್ಚಿಸಿದಂತೆ ಹೊನ್ನಿಯ ಕಥೆ ಬಳ್ಳಿ ಹೊನ್ನಿಯ ಮದುವೆ ಕಥನಕವನದಲ್ಲಿ ಹಲವಾರು ಸಾಮಾಜಿಕ ಮೌಲ್ಯಗಳನ್ನು ಕಾಣಬಹುದು.

ಬದುಕಿನುದ್ದಕ್ಕೂ ಜೀವಿ ಹೋರಾಡಲೇಬೇಕು. ಬಾಳಿನ ದಾರಿಗಳು ಭೂಪಟದ ನಕ್ಷೆಯಂತಲ್ಲ. ದಿನಕ್ಕೊಂದು, ಕ್ಷಣಕ್ಕೊಂದು ನೋವು, ಸಂಕಟ, ಸುಖದ ಹೊಡೆತಗಳಿಂದಾಗಿ ದಿಕ್ಕು ಬದಲಾಯಿಸಬಹುದು. ಇಲ್ಲವೇ ದಿಕ್ಕು ತಪ್ಪಬಹುದು. ಅದಕ್ಕೆ ಜೀವನವನ್ನು ಹಿರಿಯರು ಒಂದು ಸಮರ ಎಂದದ್ದು.

ಬದುಕಿನ ಭವಿಷ್ಯ ಸುಖಕರವಾದದ್ದು ಎಂದು ತಿಳಿದಾಗ ಜೀವಿಗೆ ಹರ್ಷವಾಗುತ್ತದೆ. ಕರಾಳವಾದುದೆಂದಾಗ ಭಯಗ್ರಸ್ತನಾಗುತ್ತಾನೆ. ಹಾಗಾಗಿ ತನ್ನ ಬಾಳು ಸದಾ ಸಂತಸದಾಯಕವಾಗಿರಲೆಂದು ಆಶಿಸುತ್ತಾನೆ. ಕಾವ್ಯದಲ್ಲಿ ಈ ಆಸೆಯು ಆದೇಶವಾಗಿ, ಕೋರಿಕೆ ಮಾಗಿ ಬೇಡಿಕೆಯಾಗಿ ಅರ್ಥವ್ಯಾಪ್ತಿಯನ್ನು ಪಡೆದುಕೊಳ್ಳುತ್ತದೆ.

ದೈವವೆ ನಿಮಗೊಡನಾಟವ
ಕೊಟ್ಟಿತು
ದೈವವೆ ಅಗಲಿಕೆಗೊಟ್ಟಿಹುದು
ಅದರೊಂದಾಣತಿ
ಮೀರುವ ದಂಪತಿ
ಪಾಪದ ತೊಟ್ಟಿನ ಹೂವಹುದು.

ಧಾರ್ಮಿಕ ಮೌಲ್ಯವೊಂದನ್ನು ಕವಿ ನೀಡುವುದರ ಜೊತೆಗೆ ನೊಂದ ಮನಸ್ಸಿಗೆ ಸಾಂತ್ವನವನ್ನು ನೀಡುವ ಪ್ರಯತ್ನ ಮಾಡುತ್ತಾರೆ. ಜೀವನದಲ್ಲಿ ಬರುವ ಕಷ್ಟನಷ್ಟಗಳನ್ನೆಲ್ಲಾ ದೇವರೆಡೆಗೆ ಸಾಗಲು ದೇವರು ಕೊಟ್ಟ ವರವೆಂದು ಭಾವಿಸಬೇಕು. ಆ ಮೂಲಕ ಕಷ್ಟಗಳನ್ನು ಎದುರಿಸಬಹುದು ಎನ್ನುವ ನಿಲುವು ಇಲ್ಲಿದೆ.



ಕೂಸಾಗಿರೆ ಪ್ರೇಮಕೆ
ಉಪವಾಸವು ;
ಭಕ್ತಿಯರ್ಪಣೆ ; ನುಡಿ ಮಡಿಯು
ತಂದೆಯೇ ದೇವರು
ಮನೆಯೇ ದೇಗುಲ
ಬಾಳ್ವುದೇ ಕೊನೆವರ ನೀ ಪರಿಯು ?

ಹೊನ್ನಿಯ ಈ ನಿಲುವಿನಲ್ಲಿ ಗಂಭೀರತೆಯಿದೆ. ಸಾಂಪ್ರದಾಯಿಕ ಚಿಂತನೆಯಿದೆ. ಆಕೆ ಚೆನ್ನನನ್ನು ಪ್ರೀತಿಸಿದರೂ ತಂದೆಯ ಮಾತನ್ನು ಮೀರದವಳು. ಆಕೆಗೆ ತಂದೆಯೇ ದೇವರು. ಮನೆಯೇ ದೇಗುಲ. ತನ್ನ ಜೀವನ ಈ ಪರಿಯಲ್ಲೇ ನಡೆಯಬೇಕೆಂಬ ಆತ್ಮ ನಿವೇದನೆಯೂ ಇಲ್ಲಿದೆ. ಸಾಮಾಜಿಕ ಮತ್ತು ಧಾರ್ಮಿಕ ಮೌಲ್ಯಗಳೆರಡೂ ಈ ಸಾಲಿನಲ್ಲಿ ಮಿಳಿತವಾಗಿರುವುದನ್ನು ನಾವು ಗಮನಿಸಬಹುದು.

ತಂದೆಗೆ ಎದುರಾಡುವ ಪದ್ಧತಿಯಿಲ್ಲದ ಸಂಪ್ರದಾಯದ ಹೆಣ್ಣು. ಆದುದರಿಂದ ಒಲಿದ ಚೆನ್ನನನ್ನು ಬಿಡುತ್ತಾಳೆ.

ಈ ಪರಿಯಲಿ ಕೈ
ಹಿಡಿಯುವುದು ಬಿಡುವುದ
ನಮ್ಮಧಿಕಾರಕೆ ಸೇರದುದು
ಮನೆತನಗಳ ನಡೆ

ವಳಿಯಂತಂತೆಯ

ನಡೆವುದೆ ನಮ್ಮಯ ಕುಲಬಿರುದು

ಎನ್ನುತ್ತಾ ಸಾಮಾಜಿಕ ಮೌಲ್ಯವನ್ನು ನೇರವಾಗಿ ತನ್ನ ಮಾತುಗಳಲ್ಲಿ ಪ್ರತಿಪಾದಿಸುತ್ತಾಳೆ. ಸಾಮಾಜಿಕ ಮೌಲ್ಯಕ್ಕೆ ಒಳಗಾಗಿ ತನ್ನ ಜೀವನವನ್ನು ಬಲಿಗೊಡುತ್ತಾಳೆ.

ಕಟ್ಟಳೆ ಕಟ್ಟಿತು

ಹೊನ್ನಿಯ ಚೆನ್ನನ

ತನುಗಳ ಹಿಡಿದೀ ನೆಲದಲ್ಲಿ

ಕಟ್ಟಳೆಯುಂಟೇ !

ಕಟ್ಟುಗಳುಂಟೇ ?

ಪಡುಗಡಲಿನ ತೆರೆಯಾಳದಲಿ

ಕಥನಕವನದ ಕೊನೆಯ ಈ ಸಾಲಿನಲ್ಲೂ ಧ್ವನಿಪೂರ್ಣವಾಗಿ ಸಾಮಾಜಿಕ ಮೌಲ್ಯದ ಕಟ್ಟಳೆ ಮತ್ತು ಅದು ಕೆಲವು ಬಾರಿ ತರುವ ದುರಂತವನ್ನು ಸೂಚ್ಯವಾಗಿ ತಿಳಿಸಲಾಗಿದೆ.

ಮಾದ್ರಿಯ ಚಿತೆ :- ಕಥನಕವನವು ಮಹಾಭಾರತದಿಂದ ತೆಗೆದುಕೊಂಡದ್ದು. ಮಾದ್ರಿ ಸೀತೆಯಂತೆ ಕಷ್ಟ ಜೀವಿ. ಆದರೆ ಸೀತೆಯಂತೆ ಪರಿತ್ಯಕ್ತೆಯಾಗಿ ಭೂಗರ್ಭ ಸೇರಿಕೊಳ್ಳುವ ಬಗೆಯ ದುರಂತ ಜೀವನ ಅವಳದಲ್ಲ. ಸಹಗಮನಕ್ಕೆ ಧರ್ಮ ಶ್ರದ್ಧೆಯ ಸಾಂತ್ವನ ಗುಣವಿದೆ.[೮]

ಈ ಕಥನ ಕವನದಲ್ಲಿ ಕವಿ ಹೇಳುವ ಧಾರ್ಮಿಕ ಮೌಲ್ಯವು ಮಾರ್ಮಿಕವಾದುದಾಗಿದೆ.

ಆರಾದರೇನವರ ಒಳಬಾಳು ಬೇರಿಹುದು

ಒರೆ ಬೇರೆ, ಒಳ ಬಾಳು ಬೇರೆ

ಜೋಡಾಗಿ ಸೇರಿದರೆ ಒಂದಾಗಿ ತೋರುವುದು,

ಅದರಂತೆ ಬಾಳುವೆಯ ಮೊರೆ

ತನು-ಲೋಕ ವಿಜಯಕ್ಕೆ । ಮನ-ಮೂಕ

ಅಹಹ ! ಎಂತಹ ಬೆಸುಗೆಯಿವಕೆ !

ಚಿತ್ತಸಮರದಿ ಗೆದ್ದ-ನಿಮಿಷ ಶಾಂತಿಯ ಮದ್ದ

ಗಟ್ಟಿಗನೆ ಅವನರಸುಜಗಕೆ.

ವ್ಯಕ್ತಿಯ ಮೌಲ್ಯ ನಿರ್ಣಯವಾಗುವುದು ಅವನ ಸಾಮಾಜಿಕ ಜೀವನದಲ್ಲಿ. ಮನಸ್ಸಿನ ಒಳಹೊರಗನ್ನು ಶುದ್ಧವಾಗಿರಿಸಿಕೊಳ್ಳುವುದು ಅತೀ ಅಗತ್ಯ. ಆದರೆ ಒಳಮನಸ್ಸಿನಂತೆ ಹೊರ ಮನಸ್ಸು ಇರಲಾರದು ಅಂದರೆ ನಮ್ಮ ತೋರ್ಪಡಿಕೆ ವ್ಯವಹಾರ ಬೇರೆಯಾಗಿರುತ್ತದೆ. ಇದು ಕವಿ ಬದುಕಿನಲ್ಲಿ ಕಂಡ ಅನುಭವವೂ ಹೌದು.

ಒಬ್ಬ ಕವಿಯಾದವನು ಒಂದೊಂದು ವಿಷಯಕ್ಕೆ ಬೇರೆ ಬೇರೆಯಾಗಿ ತನ್ನನ್ನು ವಿಭಜಿಸಿಕೊಮಡು ಕಾವ್ಯಸೃಷ್ಟಿ ಮಾಡುವುಸಲ್ಲ. ಅವನ ಆವೇಶ, ಭಾವನೆ ಸಾಮಾಜಿಕ ಸ್ಥಿತಿಗತಿಗಳು ವೈಯಕ್ತಿಕ ಬೇಕು ಬೇಡಗಳೆಲ್ಲಾ ಮಿಳಿತವಾಗಿ ಕಾವ್ಯ ಕಾಲಕಾಲಕ್ಕೆ ಹೊರ ಹಾಕಲ್ಪಡುತ್ತವೆ. ಕವಿಯು ಇದೇ ಅಂತರಂಗದ ಅಭಿವೃದ್ಧಿಗೆ ಮೂರ್ತರೂಪಕೊಡುವ, ಅಭಿವ್ಯಕ್ತಿಕೊಡುವ ಭಾಷೆಯು ಅರಳಿಸುವ ಕೆಲಸವನ್ನು ಮಾಡುತ್ತಾನೆ. ಇದರಿಂದಾಗಿ ಸಮರ್ಥ ಕವಿಯ ಕಾವ್ಯ ಅಧ್ಯಯನಕ್ಕೆ ಬಹಳ ಉಪಯುಕ್ತವಾಗುತ್ತದೆ. ಹೀಗೆ ಸಾಮಾಜಿಕವಾಗಿ ಕವಿ ಬದುಕನ್ನು ಕಂಡುದು ಅಭಿವ್ಯಕ್ತಿಯ ವಿಧಾನವೇ ಸಾಮಾಜಿಕ ಧಾರ್ಮಿಕ ಮೌಲ್ಯಗಳಾಗಿ ವಸ್ತು ವಿಷಯಗಳಾಗಿ ಕಥನಕವನದಲ್ಲಿ ಮೂರ್ತರೂಪ ತಾಳಿದೆ.

ಕವಿ ದೈವದೊಂದಿಗೆ ಸಂಭಾಷಣೆ ನಡೆಸಬಲ್ಲರೇ ಹೊರತು ದೈವವನ್ನು ವಿಧಿಯನ್ನು ನಿರಾಕರಿಸುವ ನೆಲೆಗೆ ತಲುಪುವುದಿಲ್ಲ. ಬದುಕನ್ನು ಸ್ವೀಕರಿಸುವ ಮನೋಧರ್ಮ ಅತ್ಯುತ್ತಮವಾದುದೆಂಬುದು ಅವರ ಇಂಗಿತ.

ಅರಸು ಗೆಯ್ಮೆಯ ಭರದಿ ಆತ್ಮ ತತ್ವವ ತಿಳಿವ
ಪರಿಯ ಮರೆವೆವು, ಮೊರೆದು ಗರ್ಜಿಸುವೆವು
ರಾಜ್ಯಗಳ ನೊತ್ತೊತ್ತಿ ಗೆಲ್ಲವರೆ ಮೊಳಗಿದೆವು,
ಬಗೆಗರಸನಿಹನೆಂಬುದನೆ ಮರೆವೆವು.
ಇಂತು ಗಳಿಸುವ ಬಾಳ ಆಳ್ಕೆಯೆಂಬಲೆ ? ಹೇಳ !
ಪಚ್ಚೆ ಹಸುರಿನ ಹೊಲದಿ ಮೇವ ಮಂದೆ
ಒಂದುಗಳಿಗೆಯ ಮೇವ ತಿಂದು ಮರೆಯುವೆ ಸಾವ?
ಅದರಂತೆ ನಮ್ಮ ಬಾಳ – ಮಾಯೆ !

ಕವಿ ನೀಡುವ ಮೇಲಿನ ಸಾಲುಗಳಲ್ಲಿ ಅಧ್ಯಾತ್ಮದ ಅನುಭೂತಿಯಿದೆ, ಸಾಮಾಜಿಕ ಕಳಕಳಿಯಿದೆ. ಬದುಕಿನ ನಶ್ವರತೆಯ ಕುರಿತಾದ ಸಂದೇಶವಿದೆ.

ಈ ಸನ್ನಿವೇಶದಲ್ಲಿ ಪೌರುಷಕ್ಕಿಂತ ದೈಬಲವೇ ಹಿರಿದೆಂಬುದನ್ನು ಕವಿ ಪ್ರತಿಪಾದಿಸಿದಂತಿದೆ. ವಿಧಿ ತಂದುದನ್ನು ಅದು ಬಂದ ಹಾಗೆ ಸ್ವೀಕರಿಸಿ ಬದುಕನ್ನು ಜೀವಿಗಳು ಹಸನು ಮಾಡಿಕೊಳ್ಳಬೇಕಾಗಿದೆ. ಕಥನಕವನಗಳಲ್ಲಿ ವಿಷಾದವನ್ನು ತೋಡಿಕೊಂಡೇ ಅದರ ಪರಿಮಾರ್ಜನೆಗೂ ದಾರಿಯನ್ನು ಕವಿ ತೋರಿಸಿಕೊಟ್ಟಿದ್ದಾರೆ.

ಒಮ್ಮೊಮ್ಮೆ ಸುಖ ಸೌಖ್ಯ ಒಮ್ಮೊಮ್ಮೆ ಕಡು ದುಃಖ
ಒಮ್ಮೊಮ್ಮೆ ನಗೆ, ಸರಸ, ಒಮ್ಮೊಮ್ಮೆ ಅಳುವಿರಸ–
ನಮ್ಮ ಹೃದಯದ ತಂತಿಗಳೊಳಾವುದನು ಮಿಡಿಯೆ
ಹೊಮ್ಮುತಿಹುದಾವ ನಾದವೆನುತ್ತೆ ತಿಳಿದಿಹಿವೆ ?
ನಮ್ಮದೊಂದೇ ಹಾಡು–ಸಂತಸದಿ ಕುಣಿಯುವುದು
ದುಗುಡದಲಿ ಕುಗ್ಗಿ ಮುಗ್ಗರಿಸಿ ಬೀಳುವುದೆನಲು

ಬಾರಿಸುವ ಕೈ ಬೇರೆ–ಕೇಳುವಾ ಕಿವಿ ಬೇರೆ !
ಪರತಂತ್ರರೈ ನಾವು ನುಡಿಯುವೆವು ನುಡಿಸಿರೆ.

ಈ ಸನ್ನಿವೇಶದಲ್ಲಿ ಕವಿಗೆ ನೆರವಾಗಿರುವುದು ಅವರ ಆಸ್ತಿಕತೆ ಹಾಗೂ ವಿಧಿವಾದದೊಳಗಿನ ನಂಬಿಕೆಯ ಧಾರ್ಮಿಕ ಮೌಲ್ಯ ಎಂದರೆ ಎರಡು ಮಾತಿಲ್ಲ. ಆದ್ದರಿಂದಲೇ ಅವರಿಗೆ ದುಃಖವು ಮನುಷ್ಯನಿಗೆ ದೈವ ಕೊಡುವ ಪರೀಕ್ಷೆಯಾಗಿ ಕಂಡಿತೇ ಹೊರತು, ಅದರ ಸಾಮಾಜಿಕವಾದ ಆಯಾಮಗಳನ್ನು ಗ್ರಹಿಸುವ ಪ್ರಯತ್ನದಲ್ಲಿ ತೊಡಗಲಿಲ್ಲ.

ಕವಿ ಕಡೆಂಗೋಡ್ಲು ಶಂಕರ ಭಟ್ಟರದು ಕಾವ್ಯ ಕೇಂದ್ರಿತವಾದ ಜಗತ್ತು. ತಾವು ಹೇಳಬೇಕಾದುದನ್ನೆಲ್ಲ ಕಾವ್ಯದ ಮೂಲಕವೇ ಹೇಳಬೇಕೆಂಬ ನಿಲುವು ಅವರದು. ಮತ್ತು ಈ ಪ್ರಯತ್ನದಲ್ಲಿ ಅವರು ಯಶಸ್ವಿಯಾಗಿದ್ದಾರೆ.

ಇಂತು ತನ್ನೊಳು ತಾನೆ ನುಡಿಯುತ್ತ ನಡೆಯುತ್ತ
ತನ್ನಳಲ ತಾನೆ ಸಂತವಿಸುತ್ತ ತವಿಸುತ್ತ
ಕಳೆದುದನು ಮರವೆಯಲಿ ತೊಡೆಯುತ್ತ, ತಡೆಯುತ್ತ
ದೈವಬಲ ವಾರ್ಧಿಯಲಿ ಮನುಜಬಲ ತೆರಯೆಂದು,
ಅದರೊಳಗೆ ಸುಳಿವುದೇ ಕೊರೆವುದೇ
ನಮ್ಮ ಬಾಳೆಂದು ಬಗೆತಂದು ಧೃತಿಯಾಂತಂದು,
ಕಣ್ಣೀರ ತೊರೆದು ಬಗೆ ಮೋಡಗಳ ನೀಡಾಡಿ
ಎಲ್ಲ ಭವನಗಲಿದರು ಮೆರೆಯುತಿಹಳು ಮಾದ್ರಿ

ಪ್ರಕೃತಿ ಸಹಜವಾದ ಕಾಮವು ಪ್ರೇಮವಾಗಿ ಮಾರ್ಪಡುವ ಪ್ರಕ್ರಿಯೆಯನ್ನು ಕವಿ ಗೌರವಿಸಿದ್ದಾರೆ. ಸ್ತ್ರೀ ಪುರುಷರ ಸಮಾನತೆಯ ನೆಲೆಯಲ್ಲಿ ಜೀವನ ಪ್ರೇಮವನ್ನು ಕಾಣುತ್ತಾರೆ. ಬದಲಾಗಿ ಗಂಡು ಭೋಗಿ ಮತ್ತು ಹೆಣ್ಣು ಭೋಗದ ವಸ್ತು ಎನ್ನುವುದು ಕವಿಯ ಧೋರಣೆಯಲ್ಲ.

'ಮಾದ್ರಿಯ ಚಿತೆ' ಕಥನಕವನದಲ್ಲಿ ಕಾಮ ಪ್ರೇಮಗಳನ್ನು ಹೆಣ್ಣಿನ ದೃಷ್ಟಿಕೋನದಿಂದ ನೋಡುವ ಅರ್ಥೈಸುವ ಪ್ರಯತ್ನವಿದೆ. ಅದೇ ರೀತಿ ಇತರ ಕಥನಕವನಗಳಲ್ಲೂ ಸಾಮಾಜಿಕ, ಧಾರ್ಮಿಕ ಮೌಲ್ಯಗಳು ಸಂದರ್ಭೋಚಿತವಾಗಿ ಮೂಡಿದೆ.

'ಹೆಣ್ಣು' ಕಥನಕವನದಲ್ಲಿ ಒಡಮೂಡಿದ
ಆತ್ಮವೆನ್ನೊಳಿಹುದೆಂಬೆಯ ?
ಇದ್ದರದರ ಬಿಂಬ ನೀನು !
ದೇವನೊಬ್ಬನಿಹನೆಂಬೆಯ ?
ಇದ್ದರವನೆ ಈ ಕಂದನು !
ಕಣ್ಣಮುಂದೆ ಆತ್ಮದಳಿವ,

ದೇವರಳಿವ ಸಹಿಸಲಾರೆ
ಹೊಟ್ಟೆಯೊಂದೆ ಹಗೆಯತೆರದೆ
ಮತಿಯೆ ಸೋಲನೊಪ್ಪಲಾರೆ !

ಎಂಬ ಸಾಲುಗಳಲ್ಲಿ ತನ್ನ ಪ್ರೀತಿಯಲ್ಲೇ ಹೆಣ್ಣು ದೈವದ ಅಸ್ತಿತ್ವವನ್ನು ಕಾಣುತ್ತಾಳೆ.

ದೇವರಿರಲು ದೈವವಿರಲು
ಸೇವೆಗೊಂಡು ತಣಿಯುತಿರಲು
ತನ್ನ ಗಂಡು ತನ್ನದೆಂದು
ಧೈರ್ಯ ಗೊಂಬ ಬಾಲೆಯವಳು
ದಿನ ಜೀವಿ ಕೊಡುವ ಕಾಯ
ದೇವ ದೈವಗಳಿಗು ಕ್ಷೇಮ
ಬಡವರು ಅದೃಷ್ಟವೆನಲು
ದೃಷ್ಟ ಎನಿಸದಿರುವ ಕಷ್ಟ.

ಎನ್ನುವ ಈ ಮೇಲಿನ ಸಾಲುಗಳಲ್ಲೂ ಕೂಡಾ ಧಾರ್ಮಿಕ ಮೌಲ್ಯದೊಂದಿಗೆ ಸಾಮಾಜಿಕ ಮೌಲ್ಯವೂ ಮಿಳಿತವಾಗಿದೆ.

ದೈವವನು ಶಪಿಸಲೇಕೆ ?
ದೊರೆಯದುದಕೆ ಜಪಿಸಲೇಕೆ ?
ಲೋಕ ನಿಯತಿ – ಕಾಲದ ಗತಿ
ವೈರಿಯನುತೆ ಶಪಿಸಲೇಕೆ ?
ದುಃಖ ಸುಳಿವು ಹೊಂದಿ ಬೆರಸೆ
ಜೀವನ ರಸ ಪಾಕವಹುದು
ಒಂದೆ ನಲ್ಮೆ ಒಂದೆ ನೋವು –
ಅದುವೆ ವಿಷದ ಪಾಕವಹುದು

ಬದುಕಿನಲ್ಲಿ ನಡೆಯಬೇಕಿರುವುದು ನಡೆದೇ ನಡೆಯುತ್ತದೆ. ಅದಕ್ಕಾಗಿ ದೈವವನ್ನು ಶಪಿಸುವುದು–ವಿಧಿಯನ್ನು ಜರೆಯುವುದು ತರವಲ್ಲ, ಎಂದು ನಾವು ಅರಿಯಬೇಕಾಗಿದೆ.

'ಭೂತಾಳ ಪಾಂಡ್ಯ' ಕಥನಕವನದಲ್ಲೂ ಕೂಡಾ ಸಾಮಾಜಿಕ ಮತ್ತು ಧಾರ್ಮಿಕ ಮೌಲ್ಯಗಳನ್ನು ನಾವು ಕಾಣಬಹುದು.

ಎಲ್ಲರನು ಕಟ್ಟುತಿಹ ನಿಯಮಕ್ಕೆ ಬಾಹಿರನೆ
ಪಾಂಡ್ಯ ನೀ ದೈವಗಳ ಸೊಕ್ಕಿಸುವ ಮಂದಿಗಳೆ
ಹಲವುಗಳೊಡೆತನವ ನೊಲ್ಲೆನೆನ್ನುವ ಶಕ್ತಿ
ನರರಿಗಿದ್ದರು ; ಮೀರಿ ನಡೆವುದಕೆ ಫಲವಾಗಿ

ಘೋರ ಸಂಕಟಗಳೇಳುವುದನಾದರು ಕಂಡು
ನೂರಾರು ಜನರ ಕಂಬನಿಗಳುದುರಲು ಕಂಡು
ಅಜ್ಞಾನವೆನಿಸಿದರು ಅದನೆ ನೆಮ್ಮುತ ಬಾಳಿ
ನೋವವರ ನೋವನಾರಿಸಬೇಕು ; ಇದೆ ಯುಕ್ತಿ

ದೈವಕ್ಕೆ ಅಧೀರರಾಗದವರು ಯಾರೂಯಿಲ್ಲ. ಈ ಕಾವ್ಯದ ವಸ್ತು ನಿರ್ವಹಣೆಯಲ್ಲಿ ಹೆಚ್ಚಿನ ಮಾನವೀಕರಣವನ್ನು ಬೆಸೆದಂತೆ ಕಾಣುತ್ತದೆ. ಬದುಕು ಸಾವುಗಳ ಅರ್ಥ ಸ್ವಾಮಿನಿಷ್ಠೆ ಬಂಧುತ್ವದ ಗಾಢತೆಗಳು ಗೋಚರಿಸುತ್ತದೆ.

ದುರಂತದ ಅಂಕದ ಬೆನ್ನಿಗೆ ಸುಖಾಂತದ ಅಂಕ ತೆರೆಯೇರಿತು. ಜಯ, ಸತ್ಯವತಿ, ದೇವಪಾಂಡ್ಯ ಎಲ್ಲರೂ ಬಾರಕೂರ ದಂಡೆಯಲ್ಲಿ ಒಂದಾಗುತ್ತಾರೆ. ಈ ಕಾವ್ಯ ಸುಖಾಂತವಾದರೂ ಅದು ಕರುಣದ ಕೋಡಿಯಲಿ ಹರಿವ ರುದ್ರಭೀಷಣ ಕಾವ್ಯ.

ಮಾದ್ರಿಯ ಚಿತೆಗಿಂತ ಭಿನ್ನವಾದ ವಸ್ತು ಹಾಗೂ ಅದರ ನಿರ್ವಹಣೆ ಇಲ್ಲಿ ಗೋಚರಿಸುತ್ತದೆ. ಬದುಕು–ಸಾವು, ಕನಸು–ನನಸು, ಸ್ವಹಿತ–ಲೋಕಹಿತ, ದೈವ ಮಾನವ ಈ ಸಂದರ್ಭದಲ್ಲಾಗುವ ಸಂಘರ್ಷದ ಚಿತ್ರಣ ಇಲ್ಲಿದೆ [೧೦]. ಇಲ್ಲಿ ಕುಂಡೋದರನ ನರಾಹುತಿಯ ಬೇಡಿಕೆ ಮನುಷ್ಯನ ರಾಕ್ಷಸೀಯ ಹಸಿವಿನ ಸಂಕೇತವಿದ್ದಂತೆ ಕಾಣುತ್ತದೆ. ಕೊನೆಗೆ ಕುಂಡೋದರನ ರಾಕ್ಷಸೀಯತೆಯ ಪರಿವರ್ತನೆಯ ತಿರುವನ್ನು ಪಡೆದುಕೊಂಡುದು ಬದುಕು ಮತ್ತು ಬದುಕಲು ಬಿಡು ಎನ್ನುವ ತತ್ವವನ್ನು ಪ್ರತಿಪಾದಿಸುವ ಭಾರತೀಯ ಸಂಪಾದನೆಯ ಫಲ ಎಂದು ಬಿದರಹಳ್ಳಿ ನರಸಿಂಹಮೂರ್ತಿಯವರು ಬರೆಯುತ್ತಾರೆ. ಅದೇ ರೀತಿ ಭೂತಾಳ ಪಾಂಡ್ಯ ಕಥನಕವನದಲ್ಲಿ ಮೂಡುವ ಅರಸನು ಕೂಡಾ ಸಾಮಾಜಿಕ ಮೌಲ್ಯಗಳಿಗೆ– ಧಾರ್ಮಿಕ ಮೌಲ್ಯಗಳಿಗೆ ಮುಖವಾಣಿಯಾಗುತ್ತಾನೆ. ಪಾಂಡ್ಯ ಎದೆ ತುಂಬಿ ಸಾವಿಗೆ ನೀಡುವ ಆಹ್ವಾನ ಕಾವ್ಯದ ದುರಂತ ಪ್ರಜ್ಞೆಯ ಗಾಂಭೀರ್ಯವನ್ನು ಗಟ್ಟಿಗೊಳಿಸುತ್ತದೆ.

ಸಾವೆ ಕುಂಡೋದರಾ ನಿನ್ನೆ ಮುನಿಸಿನ ಗಾಳಿ
ಹಳೆಯ ಹೆಮ್ಮರವಿದನು ಹೊಡೆದಪ್ಪಳಿಸಿ ನೆಲಕೆ
ಚಿಗುರಿಡುವ ಕವಲಿಡುವ ಎಳನಸಿಯ ಬೆಳೆಯಿಸಲಿ.

ಇಳೆಗೆ ಕಟ್ಟಿದ ಕಾಲ ಶೃಂಖಲೆಯ ಕೊನೆಗಾಣಿಸು ಹರಿವ ಕಾಲ ಸನ್ನಿಹಿತವಾಗಿರುವಾಗ ತಂಗಿ ಸತ್ಯವತಿಯನ್ನು ಕಂಡು ಎದೆ ಮೆಚ್ಚಿ ಎರಡು ನುಡಿ ನುಡಿಯಲೆಂದು ಜಯನನ್ನು ಕಂಡು ಮುತ್ತಿಡಲೆಂದು ನಡೆದಾಗ, ಅಣ್ಣ ತಂಗಿಯರ ನಡುವೆ ನಡೆವ ಸಂಭಾಷಣೆ ಮುಂದೆ ನಡೆಯಲಿರುವ ದುರಂತಕ್ಕೆ ನಾಂದಿಯಂತಿದೆ[೧೧]. ಕರುಣ ರಸದ ಸ್ಥಾಯೀ ಭಿತ್ತಿಯ ಸಾವಿನ ಹಿನ್ನೆಲೆಯಲ್ಲಿ ಬದುಕಿನ ಸಾರ್ಥಕತೆ ಮಾನವನ ಸಂಕಲ್ಪ ಶಕ್ತಿಯ ಸಾಮರ್ಥ್ಯಗಳ ಹುಡುಕಾಟವನ್ನು ಗುರುತಿಸಬಹುದು. ಸಾಮಾಜಿಕ ಮೌಲ್ಯವನ್ನು ಈ ಭಾಗದಲ್ಲಿ ನಾವು ಕಾಣಬಹುದು.

ಪಾಂಡ್ಯ ತಂಗಿ ಸತ್ಯವತಿಯನ್ನು ತನ್ನಳಿಯ ಜಯನೆಲ್ಲಿರುವನೆಂದು ಮತ್ತೆ ಮತ್ತೆ ಕೇಳಿದಾಗ ಆಕೆ

ಕಾರ ಮುಗಿಲಲ್ಲವಿದು ಬೇಸಗೆಯ ಬೆಳ್ಮುಗಿಲು
ತೆಳ್ಪನೇ ತೇಲಲಿದ ಜೀವವದು ಎಲ್ಲಿಗೊ ।
ಹೇಗಿರುವನಣ್ಣ ಬೆಂಡಿಗೋ । ಗರುಡಿಗೋ ಕಾಣೆ
ಕಾಲೊಳೆಳೆವುದು ನಮ್ಮ ದೈವ ಚೆಂಡಾಡುತಿದೆ.

ಸತ್ಯವತಿ ಆಡುವ ಈ ಮೇಲಿನ ಮಾತುಗಳು ಧಾರ್ಮಿಕ ಮೌಲ್ಯವನ್ನು ಸಾಮಾಜಿಕ ಮೌಲ್ಯದೊಳಗೆ ನೀಡುವಂತಿದೆ. ಇದರೊಂದಿಗೆ ದುರಂತದ ಛಾಯೆಯನ್ನು ಇನ್ನಷ್ಟು ಗಟ್ಟಿಗೊಳಿಸುತ್ತದೆ. ತಾನಳಿದ ಮೇಲೆ ಎನ್ನ ಕನಸಿನ ಮನದೊಳಗೆ ಆತ ಬಾಳುತಿರಬೇಕೆಂಬ, ಬಾಳುತಿರಬಹುದೆಂಬ ಧೈರ್ಯವಿದೆ ಎಂದು ಪಾಂಡ್ಯ ಹೇಳುವಲ್ಲಿ ವಿಧಿನಿಯಮವನ್ನು ಮಾನವ ಎದುರು ಹಾಕಿಕೊಳ್ಳುವ ಸೂಚನೆಯಿದೆ.

ಇದೀಗ ತಂಗಿ ಸತ್ಯವತಿ ಕಣ್ಣೀರ ಧಾರೆಯೊಂದಿಗೆ ತನ್ನ ಮನದ ಭಾವಗಳ ಬಿಚ್ಚಿ ಮಾತ ತೇಲಿಸಲು ನಿರ್ಧರಿಸುವಳು ತನ್ನ ಕುಡಿ ಮುರುಟಿದರೂ ಹಿಡಿಸಬಲ್ಲ ಆಕೆ ಒಡಹುಟ್ಟಿದ ಅಣ್ಣನ ಸಾವನ್ನು ಬಲ್ಲಳು. ಆದರೆ ಆಕೆಯ ಕೋರಿಕೆಯನ್ನು ಪಾಂಡ್ಯ ಮನ್ನಿಸಲಾರ. ಕುಂಡೋದರಗೆ ತುತ್ತನಿಕ್ಕಲು ಎಲ್ಲಾ ಸನ್ನಾಹಗಳು ನಡೆದು ಹೋಗಿವೆ. ಎಲ್ಲರಳಿವಂದದಲಿ ನಿನ್ನಣ್ಣ ಸಾವುದೆ ? ರೋಗರುಜಿನಗಳ ಕಚ್ಚಿ ಹರಿಯುವಾಟಕೆ ಹರಹಿ ಚಿಂದಿಯಾಗಲೆ ದೇಹ ! ಪುರುಷನಾಗಿದ್ದವಗೆ ಕುರಿಸಾವು ಬರಬಹುದೆಂದು ಬಯಸ್ಪೂರದು ಎನ್ನುವ ಮೂಲಕ ಆತ್ಮಾರ್ಪಣೆ ಎನ್ನುವುದು ಘೋರ ಮರಣ ಎಂದು ದೇವ ಪಾಂಡ್ಯ ತಿಳಿದಂತಿರುವ ಮೇಲಿನ ಮಾತುಗಳನ್ನು ಸಾಮಾಜಿಕ–ಧಾರ್ಮಿಕ ಮೌಲ್ಯಗಳನ್ನು ವಿಶ್ಲೇಷಿಸುತ್ತವೆ.

ಕಥನಕವನದ ಮುಂದುವರಿದ ಭಾಗದಲ್ಲಿ ಜಯನನ್ನು ಕಾಣದ ದೇವ ಪಾಂಡ್ಯ ಸಂದೇಹ ಭೀತಿಯಿಂದ ತೊಳಲಾಡುತ್ತಾನೆ.

'ಗೋರಿಗೊಂಡಿವೆ ಮನದೆ ಜಯನ ಸೊಲ್ಲಿಲ್ಲದೆ' ಆಗಬಾರದದು ಆಗುದೆಂಬ ಆತಂಕ. ಇದೀಗ ಅಣ್ಣನ ಪಾದಕ್ಕೆರಗಿ ಎದೆಯೊಡೆವ ಹಾಗೆ ರೋಧಿಸಿದಳು ಸತ್ಯವತಿ. ಕುಂಡೋದರನ ಸೇವೆಗಾಗಿ ತನ್ನ ಮಗನನ್ನು ಕಳುಹಿಸಿದ ಸಂಗತಿಯನ್ನು ಸ್ಫೋಟಗೊಳಿಸಿದಳು. ಇದರ ಪರಿಣಾಮವನ್ನು ಕವಿ ಕಡೆಂಗೋಡ್ಲು ಶಂಕರಭಟ್ಟರು ಈ ರೀತಿ ನಿರೂಪಿಸಿದ್ದಾರೆ.

ಪಾಂಡ್ಯನ ದೇಹ
ಉರಿಕೊಳ್ಳಿಯಂತುರಿದು ಸಿಡಿದಿತ್ತು ಹಾ ! ತಂಗಿ
ಕುಂಡೋದರನು ಕೊಲ್ಲಬೇಕಿತ್ತು ನೀನೆ ಎದೆ
ಮಲಗಿಟ್ಟು ಕೊಂದೆಯಾ ? ಬಾಳ್ಗೊಗ್ಗೆ ಮಾಡಿದೆಯಾ

ಎನ್ನ ಜೀವನ ದೈವದೆಂಜಲೆಂದೆನಿಸಿದೆಯಾ
ಎನ್ನ ಲೋಕದ ಮುಂದೆ ಮಸಣವನ್ನು ಕಡಿದೆಯಾ
ಜಯನ ಕುಂಡೋದರನ ಗಂಟಲಿಗೆ ಗಿಡಿದೆಯಾ

ಎನ್ನುವ ಸಾಲುಗಳಲ್ಲಿ ಕವಿ ದೇವ ಪಾಂಡ್ಯನ ಭಾವಸ್ಫೋಟವನ್ನು ಮಾಡಿದ್ದಾರೆ.

ಬಾಲಕ ಜಯ ಮಹಾನ್ ಸಾಧಕನಂತೆ ಭಾಸವಾಗುತ್ತಾನೆ. ಮಾವನಿಗಾಗಿ ಸಾಯವಲ್ಲಿ ಬದುಕಿನ ಸಾರ್ಥಕ್ಯವನ್ನು ಕಾಣುತ್ತಾನೆ. ಆತ್ಮ ಹಿಗ್ಗಿದೆ ಧರಣಿಯಣುವಾಗಿ ತೋರುತಿದೆ ಆತಗೆ ೨೨. ಮುಗಿಲ ಮೇಗಡೆ ಹಾರಿ ನಕ್ಷತ್ರಗಳ ಕಿತ್ತು ತಹುದೆನಲು ತಾರನೇ ಮಾವನೊಂದಾಣತಿಗೆ ? ಎಂದು ಸಂಭ್ರಮದಿಂದ ತನ್ನಲ್ಲೇ ತಾನು ಆಡಿಕೊಳ್ಳುತ್ತಾನೆ. ಲೋಕದ ಹಿತಕ್ಕಾಗಿ, ರಾಜ್ಯದ ಹಿತಕ್ಕಾಗಿ ತನ್ನನ್ನು ಇಲ್ಲವಾಗಿಸುವ ವೀರ ನಿರ್ಧಾರ ಮಾಡಿದ ಜಯನ ಸಾಮಾಜಿಕ ಮೌಲ್ಯವುಳ್ಳ ಪ್ರಜ್ಞೆ ಗಂಭೀರವಾದುದು.

ಈ ಬಗೆಯಾಗಿ ಕಥನಕವನಗಳಲ್ಲಿ ಮೂಡಿದ ಸಾಮಾಜಿಕ ಧಾರ್ಮಿಕ ಮೌಲ್ಯಗಳು ವ್ಯಕ್ತಿಯಿಂದ ಆವರಿಸಲ್ಪಡುವ ನೇರವಾಗಿ ಸಮಾಜಕ್ಕೆ ಹೆಚ್ಚು ಉಪಯುಕ್ತವಾಗುವ ಮೌಲ್ಯಗಳಾಗಿವೆ. ಮಾನವ ನಿರ್ಮಿತ ಸಮಾಜವು ಒಬ್ಬರಿಂದ ಇನ್ನೊಬ್ಬರಿಗೆ ಅಗತ್ಯವಾದ ಕೆಲವು ಆದರ್ಶಗಳು, ಮಾದರಿಗಳು ಸಾಮಾನ್ಯ ನೀತಿ ನಿಯಮ ನಿಬಂಧನೆಗಳನ್ನು ಅವರ ವರ್ತನೆ, ನಡತೆ ಕರ್ತವ್ಯ ಮತ್ತು ಹೊಣೆಗಾರಿಕೆಗೆ ಸಂಬಂಧಿಸಿದಂತೆ ರೂಪಿಸುತ್ತದೆ.

ವ್ಯಕ್ತಿಗತವಾಗಿ ಮನುಷ್ಯನು ಸಮಾಜದ ಶಿಶು ಮತ್ತು ತುರ್ತು ಅವಶ್ಯಕ ಘಟಕ. ಮಾನವೀಯ ಪ್ರೀತಿ, ವಿಶ್ವಭ್ರಾತೃತ್ವ, ನಿಷ್ಕಪಟತೆ, ಪ್ರಾಮಾಣಿಕತೆ, ಚಾರಿತ್ರ್ಯಪೂರ್ಣತೆ, ಸಹಾಯ ಮಾಡುವ ದೃಢಬುದ್ಧಿ, ಸರ್ವಸಾಮಾನ್ಯ ಉಪಯೋಗದ ದೃಷ್ಟಿಯಿಂದ ಚಟುವಟಿಕೆ ಮತ್ತು ಕೆಲಸಗಳನ್ನು ಮಾಡುವುದು ಮೊದಲಾದವು ಆರೋಗ್ಯಕರ ಸಮಾಜ ಜೀವನದ ಘಟಕಾಂಶಗಳಾಗಿವೆ.

ಸಾಮಾಜಿಕ ಮೌಲ್ಯಗಳು ಸಮಗ್ರವಾಗಿದ್ದು ವ್ಯಕ್ತಿಗಳನ್ನು ಒಂದುಗೂಡಿಸುತ್ತದೆ. ಯಾವ ಮೌಲ್ಯವು ಸಾಮಾಜಿಕ ಒಗ್ಗೂಡುವಿಕೆಯ ಕ್ರಿಯೆಯನ್ನು ನಿಯಂತ್ರಿಸುತ್ತದೋ ಅದು ಉನ್ನತ ಸ್ತರದ ಮೌಲ್ಯವಾಗುತ್ತದೆ. ವ್ಯಕ್ತಿಯ ಸಾಮಾಜಿಕ ವಿಕಾಸದ ಎಲ್ಲಾ ಹಂತಗಳಿಗೂ ಸಾಮಾಜಿಕ ಮೌಲ್ಯಗಳ ಆಶ್ರಯ ಬೇಕೇ ಬೇಕು ಎನ್ನುವುದನ್ನು ಕವಿ ಕಥನಕವನಗಳ ಮೂಲಕ ನಿರೂಪಿಸಿದ್ದಾರೆ.

ಕಥನಕವನಗಳಲ್ಲಿ ಅಡಕವಾದ ಮೌಲ್ಯಗಳನ್ನು ವಿವೇಚಿಸುವಾಗ ಪ್ರತಿಯೊಂದು ಪಾತ್ರವೂ ಒಂದೊಂದು ಮೌಲ್ಯವನ್ನು-ಜೀವನ ಮೌಲ್ಯವನ್ನು ಪ್ರತಿನಿಧಿಸುತ್ತದೆ. ಈ ಮೌಲ್ಯಗಳು ಹೊರಗಿನಿಂದ ಬಂದು ಪರಿಚಿತವಾದಂಥವು ಅಲ್ಲ. ನಮ್ಮ ಬದುಕಿನ ಅನುಭವದ ಮಧ್ಯದಿಂದ ಹುಟ್ಟಿದ್ದು. ಅಲ್ಲದೆ ಬದುಕಿನ

ಅನುಭವದ ಆಧಾರದ ಮೇಲೆ ಅರಳಿ ನಿಂತದ್ದು. ನಿಕಟವಾದ ಬದುಕಿಗೆ ಸಂಬಂಧಿಸಿದ್ದು [೧೩].

ಮೌಲ್ಯಗಳಿಗೆ ಒಂದು ಗಟ್ಟಿತನವಿದೆ. ಬದುಕನ್ನು ಸಾರ್ಥಕಗೊಳಿಸಲು ಮೌಲ್ಯಗಳು ಬೇಕು. ಮೌಲ್ಯದಿಂದ ಬದುಕಬೇಕು. ಜೀವಿಗೆ ಬದುಕು ಮುಖ್ಯ. ನಿತ್ಯದ ಜೀವನ ಮುಖ್ಯ. ಬದುಕು ಸಾರ್ಥಕವಾಗಿ, ಸುಂದರವಾಗಿ ಶಾಶ್ವತವಾಗಿರಬೇಕು. ಒಬ್ಬ ವ್ಯಕ್ತಿಯ ಬದುಕು ಸಾರ್ಥಕ್ಯವೆನ್ನಲು ಕಾರಣವಾಗುವ ಗುಣಗಳೇ ಜೀವನ ಮೌಲ್ಯಗಳು. ಇವು ಮಾನವತೆಯ ಪ್ರತಿರೂಪಗಳೂ ಹೌದು. ಜೀವನ ಮೌಲ್ಯಗಳು ಹಾಳಾಗಿವೆ ಎಂದರೆ ಮಾನವತೆಯೇ ಹಾಳಾಗಿದೆ ಎಂದರ್ಥ. ಇಷ್ಟಾದರೂ ಮೌಲ್ಯವನ್ನು ಸೂತ್ರೀಕರಿಸಿ ಹೇಳುವುದು ಅಷ್ಟು ಸರಳವಾದುದಲ್ಲ. ತಾತ್ವಿಕ ಹಿನ್ನೆಲೆಯಲ್ಲಿ ವಿವೇಚಿಸಿದಾಗ ಅದು ಅರ್ಥ ಪರಿಧಿಯನ್ನು ವಿಸ್ತರಿಸಿಕೊಳ್ಳುತ್ತ ಹೋಗುತ್ತದೆ. ಅಲ್ಲದೆ ನಮ್ಮ ಮನೋ ವ್ಯಾಪಾರ ಜಗತ್ತಿನಲ್ಲಿ ಇಷ್ಟ–ಅನಿಷ್ಟಗಳ ವಿವೇಚನೆಯ ಮೌಲ್ಯವನ್ನು ನಿರ್ಧರಿಸುತ್ತದೆ. ಅಂದರೆ ಒಪ್ಪಿತ ವ್ಯವಸ್ಥೆಯ ಅವಶ್ಯಕತೆಗೆ ಮಾರಕವಾಗದಂತೆ ಬದುಕುವುದೇ ಮೌಲ್ಯವಾಗುತ್ತದೆ. ಇದೇ ಜೀವನದಲ್ಲಿ ಬೆಲೆಯುಳ್ಳದೆಂದು ಭಾವಿಸುವ ಅಂಶ. ವಿಶ್ವದ ಇಲ್ಲಾ ಧರ್ಮಗಳು ಸಾಮಾಜಿಕ ಸ್ವಾಸ್ಥಕ್ಕಾಗಿ ನೈತಿಕ ನೆಲೆಗಳನ್ನು ನಿರ್ಮಿಸಿಕೊಂಡಿವೆ.

ಜೀವನವನ್ನು ಸಾರ್ಥಕಗೊಳಿಸುವ ಸಾರ ತತ್ವಗಳೇ ಮೌಲ್ಯಗಳು ಈ ನೈತಿಕ ನಿಲುವುಗಳು ಕಾಲ, ದೇಶ, ವ್ಯಕ್ತಿಗಳಿಗೆ ಅನುಸಾರವಾಗಿ ಬದಲಾದರೂ ಅವುಗಳ ಹಿಂದೆ ಅತೀತವಾದ, ಸಾರ್ವತ್ರಿಕವಾದ ಒಂದು ಸಾರ್ವಕಾಲಿಕ ಅಭಿಪ್ಸೆಯ ತುಡಿತ–ಮಿಡಿತಗಳಿರುವುದನ್ನು ಗಮನಿಸಬೇಕು. ಯಾಕೆಂದರೆ ಯಾವುದು ಕ್ಷಣಿಕ, ಯಾವುದು ಶಾಶ್ವತ, ಯಾವುದು ನಿಶ್ಚಿತ ಯಾವುದು ಅನಿಶ್ಚಿತ ಎಂಬುದನ್ನು ಈ ಕ್ಷಣ ಭಂಗುರ ಜಗತ್ತಿನಲ್ಲಿ ಹೇಳುವುದು ಕಷ್ಟ. ಆದರೂ ಬದುಕಿನಲ್ಲಿರುವ ಶ್ರದ್ಧೆ ಮತ್ತು ನಂಬಿಕೆಗಳು ಮೌಲ್ಯಗಳನ್ನು ಉದಾತ್ತೀಕರಿಸುತ್ತದೆ. ಉನ್ನತೀಕರಿಸುತ್ತದೆ [೧೪].

ಅದೇ ರೀತಿ ಯಾವುದೇ ಒಂದು ಕೃತಿ ಒಂದು ಯುಗದ ಸಾಹಿತ್ಯ ಸಮಗ್ರವಾಗಿ ನಮ್ಮ ಜನ ಸಮುದಾಯಗಳನ್ನು ಅವರ ಮೌಲ್ಯಗಳನ್ನು ಪ್ರತಿನಿಧಿಸುವುದೂ ಸಾಧ್ಯವಿಲ್ಲ ಎನ್ನುವುದೂ ಕೂಡಾ ಗಮನಾರ್ಹ ಅಂಶ.

ಕಥನಕವನಗಳಲ್ಲಿ ಅಡಕವಾದ ವ್ಯಕ್ತಿಗತ–ಕೌಟುಂಬಿಕ ಸಾಮಾಜಿಕ–ಧಾರ್ಮಿಕ ಮೌಲ್ಯಗಳು ಇನ್ನಿತರ ಪೂರಕ ಮೌಲ್ಯಗಳು ಪಾತ್ರಗಳ ಮೂಲಕ ನಾನಾ ವಿಧದಲ್ಲಿ ಹೊರಹೊಮ್ಮಿದೆ.

ಪ್ರತಿಯೊಂದು ಪಾತ್ರಗಳೂ ಕೂಡ ವಾಸ್ತವತೆಯನ್ನು ಗ್ರಹಿಸಿಕೊಳ್ಳುತ್ತವೆ. ತನ್ನನ್ನು ಹಾಗೂ ಇತರರನ್ನು ಆರೋಗ್ಯಕರ ಮನೋಭಾವದಿಂದ ಸ್ವೀಕರಿಸುವ ಪ್ರಜ್ಞೆ ಹೊಂದಿದೆ. ತನ್ನನ್ನು ಹಾಗೂ ಇತರರನ್ನು ಗೌರವಿಸಿಕೊಳ್ಳುವ ಪ್ರಜ್ಞೆ ಇದರೊಂದಿಗೆ ಸ್ವಯಂ ಶಿಸ್ತು ಆಧಾರಿತ ಜೀವನ ಶೈಲಿ ಸಮಸ್ಯಾ ಪರಿಹಾರ ಸಾಮರ್ಥ್ಯ. ಅದು ಸಕಾರಾತ್ಮಕ ಇಲ್ಲವೆ ನಕಾರಾತ್ಮಕ ಸಾಮಾಜಿಕ ಭಾವ, ಸಾಮಾಜಿಕ ಪ್ರತಿಕ್ರಿಯೆ ಮತ್ತು

ಸಾಮಾಜಿಕ ಪ್ರಜ್ಞೆ. ಮುಖ್ಯವಾಗಿ ಆರೋಗ್ಯಕರ ವ್ಯಕ್ತಿಗತ ಸಂಬಂಧ. ಸಾಂದರ್ಭಿಕ ವಿವೇಚನೆಗೆ ಒತ್ತು ನೀಡುವುದು. ಸ್ವಯಂ ನಿರ್ಣಯ ಕೈಗೊಳ್ಳುವುದು.

ಈ ಮೇಲಿನ ಎಲ್ಲಾ ಅಂಶಗಳನ್ನು ಕಥನಕವನದ ಪಾತ್ರಗಳಾದ ಹೊನ್ನಿ, ಹೆಣ್ಣು, ಮಾದ್ರಿ, ಸತ್ಯವತಿ ಅಲ್ಲದೆ ಹೊನ್ನಿಯ ತಂದೆ, 'ಹೆಣ್ಣು' ಕಥನಕವನದ ಊರಿನ ಗೌಡ, ಹೆಣ್ಣು ಕಥನಕವನದ ನಾಯಕ ಮಾರ, 'ಮಾದ್ರಿಯಚಿತೆ' ಯ ಪಾಂಡು ಚಕ್ರವರ್ತಿ, ಭೂತಾಳ ಪಾಂಡ್ಯ ಕಥನಕವನದ ರಾಜ ದೇವ ಪಾಂಡ್ಯ ಈ ಪಾತ್ರಗಳ ವ್ಯಕ್ತಿತ್ವದಲ್ಲಿ ಕಾಣಬಹುದು.

ಒಟ್ಟಿನಲ್ಲಿ ಕಡೆಂಗೋಡ್ಲು ಅವರ ಕಥನಕವನಗಳಲ್ಲಿ ಉದಾರ ಮಾನವತಾವಾದದ ದೃಷ್ಟಿಯೇ ಪ್ರಧಾನವಾಗಿ ಕಂಡುಬರುತ್ತದೆ.

**ಟಿಪ್ಪಣಿಗಳು :-**


೧. ಸುಬ್ರಾಯ ಚೊಕ್ಕಾಡಿ ಶಂಕರ ಭಟ್ಟರ, ಪುಟ ೧೮೧, ಕಥನ ಕವನ ಹೆಣ್ಣು ವಾಙ್ಮಯ ತಪಸ್ವಿ ಕಡೆಂಗೋಡ್ಲು ಶಂಕರಭಟ್ಟ ಸ್ಮಾರಕ ಅಭಿನಂದನಾ ಗ್ರಂಥ ಸಂ. ನಾವಡ ಎ.ವಿ. ಡಿ.ವಿ.ಕೆ. ಪ್ರಕಾಶನ, ೧೯೭೭

೨. ಮಹೇಶ್ವರಿ ಯು., ಪುಟ ೬೮, ಇದು ಮಾನುಷಿಯ ಓದು, ಶಿವರಾಮ ಕಾರಂತ ಅಧ್ಯಯನ ಕೇಂದ್ರ ವೀವೇಕಾನಂದ ಕಾಲೇಜು, ಪುತ್ತೂರು ೨೦೦೧

೩. ಸುಬ್ರಾಯ ಚೊಕ್ಕಾಡಿ ಶಂಕರ ಭಟ್ಟರ ಪುಟ ೧೮೨, ಕಥನ ಕವನ ಹೆಣ್ಣು ವಾಙ್ಮಯ ತಪಸ್ವಿ ಕಡೆಂಗೋಡ್ಲು ಶಂಕರಭಟ್ಟ ಸ್ಮಾರಕ ಅಭಿನಂದನಾ ಗ್ರಂಥ ಸಂ. ನಾವಡ ಎ.ವಿ. ಡಿ.ವಿ.ಕೆ. ಪ್ರಕಾಶನ, ೧೯೭೭

೪. ನಾವಡ ಎ.ವಿ., ಪುಟ ೨೩, ನವೋದಯದ ಕೋಗಿಲೆ – ಕಡೆಂಗೋಡ್ಲು ಶಂಕರ ಭಟ್ಟ ಕನ್ನಡ ಸಂಘ, ಕಾಂತಾವರ ೨೦೧೨

೫. ಉಷಾ ಎಂ., ಪುಟ ೬೪, ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೪

೬. ನಾವಡ ಎ.ವಿ., ಪುಟ ೨೬, ನವೋದಯದ ಕೋಗಿಲೆ – ಕಡೆಂಗೋಡ್ಲು ಶಂಕರ ಭಟ್ಟ ಕನ್ನಡ ಸಂಘ, ಕಾಂತಾವರ ೨೦೧೨

೭. ಬಿಲಕಾರ ಎಂ.ಎಚ್. ಪುಟ ೯೫, ಮೌಲ್ಯಾಧಾರಿತ ಶಿಕ್ಷಣ ವಿಜೇತ್ ಪ್ರಕಾಶನ, ಗದಗ ೨೦೧೯

೮. ಸ್ವಾಮಿ ಜಗದಾತ್ಮಾನಂದ ಪುಟ ೧೨೫, ಬದುಕಲು ಕಲಿಯಿರಿ ಶ್ರೀ ರಾಮಕೃಷ್ಣ ಮಿಷನ್ ಮೈಸೂರು ೧೯೮೧

೯. ಶ್ರೀಧರ ಬಿ.ಹೆಚ್. ಪುಟ ೧೬೦, ಅಭಿಜಾತ ಕೃತಿ ನಲ್ಮೆ ವಾಙ್ಮಯ ತಪಸ್ವಿ ಕಡೆಂಗೋಡ್ಲು ಶಂಕರ ಭಟ್ಟರ ಅಭಿನಂದನ ಗ್ರಂಥ ಸಂ. ನಾವಡ ಎ.ವಿ. ಡಿ.ವಿ.ಕೆ ಮೂರ್ತಿ, ಮೈಸೂರು ೧೯೭೭

೧೦.ನಾವಡ ಎ.ಪಿ. ಪುಟ ೨೯, ನವೋದಯದ ಕೋಗಿಲೆ – ಕಡೆಂಗೋಡ್ಲು ಶಂಕರ ಭಟ್ಟ ಕನ್ನಡ ಸಂಘ, ಕಾಂತಾವರ ೨೦೧೨

೧೧.ಅದೇ ಪುಟ ಸಂಖ್ಯೆ ೨೯

೧೨.ಅದೇ ಪುಟ ಸಂಖ್ಯೆ ೨೫

೧೩.ರಾಜಶೇಖರ್ ವಿ.ಕೆ. ಪುಟ ೬೧, ಪ್ರಭುತ್ವ ಮತ್ತು ಜೀವನ ಮೌಲ್ಯ ಆಳ್ವಾಸ್ ನುಡಿಸಿರಿ ೨೦೧೦ ಕನ್ನಡ ನಾಡು ನುಡಿಯ ರಾಷ್ಟ್ರೀಯ ಸಮ್ಮೇಳನ ಸಮಗ್ರ ವಾಙ್ಮಯ ೨೦೧೦

೧೪.ಅದೇ ಪುಟ ಸಂಖ್ಯೆ ೩೨

# ಅಧ್ಯಾಯ – ೫

## ಕಡೆಂಗೋಡ್ಲು ಶಂಕರ ಭಟ್ಟರ ಕಥನಕವನಗಳ ಭಾಷೆ – ತಂತ್ರಗಳು

ಕನ್ನಡ ಸಾಹಿತ್ಯದ ನವೋದಯವೆಂದು ಇಂದು ಕರೆಯುತ್ತಿರುವ ಸಾಹಿತ್ಯ ಮಾರ್ಗವು ಹತ್ತೊಂಬತ್ತನೆಯ ಶತಮಾನದ ಕೊನೆ ಮತ್ತು ಇಪ್ಪತ್ತರ ಆದಿಭಾಗದಲ್ಲಿ ರೂಪ ತಳೆಯುತ್ತಿದ್ದ ಸಂದರ್ಭದಲ್ಲಿ ಇಲ್ಲಿನ ಲೇಖಕರಿಗೆ ಹಲವು ನಿಲುವುಗಳಿದ್ದುದು ಕಂಡುಬರುತ್ತದೆ. ಒಂದು ಕಡೆ ದೇಶೀ ಸಂಸ್ಕೃತಿಯನ್ನು ಉಳಿಸುವ ಪ್ರಯತ್ನವಿದೆ. ಅದೇ ರೀತಿ ನಾಡುನುಡಿಗಳ ಏಳಿಗೆಯ ನಿಲುವೂ ಕೂಡಾ ಅಂದಿನ ಸಾಹಿತಿಗಳಿಗಿದ್ದಂತೆ ಕಾಣುತ್ತದೆ.

ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದಲ್ಲಿ ಮತ್ತು ಇಪ್ಪತ್ತರ ಆದಿ ಭಾಗದಲ್ಲಿ ದಕ್ಷಿಣಕನ್ನಡ ಜಿಲ್ಲೆಯಲ್ಲಿ ನಡೆದಷ್ಟು ಭಾಷೆಯ ಬಗೆಗಿನ ಕಾರ್ಯವು ಕರ್ನಾಟಕದ ಯಾವ ಭಾಗದಲ್ಲೂ ನಡೆದಿಲ್ಲ ಎನ್ನಬಹುದು. ಕ್ರಿಶ್ಚಿಯನ್ ಮಿಷನರಿಗಳು ಭಾಷೆಯನ್ನು ಕಲಿಯುವ ಪ್ರಕ್ರಿಯೆಯಾಗಿ ನಿಘಂಟುಗಳನ್ನು, ವ್ಯಾಕರಣ, ಛಂದೋಗ್ರಂಥಗಳನ್ನು ಸಂಪಾದಿಸಿ ಹೊರತಂದರು. ಹೀಗೆ ಮಾಡುವಾಗ ಕನ್ನಡವನ್ನಲ್ಲದೆ ತುಳುವನ್ನು ಗಮನಿಸಿದ್ದಾರೆ. ಮಿಷನರಿಗಳು ಭಾಷೆಯ ಬಗೆಗೆ ಹೊಸ ತಿಳುವಳಿಕೆಯನ್ನು ಮೂಡಿಸಿದುದು ಕೂಡಾ ಗಮನಾರ್ಹ ಅಂಶ[೧].

ಕಡೆಂಗೋಡ್ಲು ಶಂಕರ ಭಟ್ಟರ ಸಾಹಿತ್ಯ ರಚನೆಗೆ ಪ್ರೇರಕವಾದದ್ದು ಪ್ರಕೃತಿ ಇದು ಸುತ್ತಿ ಬಳಸಿ, ಎತ್ತಿ ಆಡಿಸಿ, ಅಳಿಸಿ, ನಗಿಸಿ, ಕೆಣಕಿ, ಬೆದಕಿ, ನಿಂತು ನಡೆಸಿದ ಶಕ್ತಿ. ಆದುದರಿಂದಲೇ ಇವರ ಕೃತಿಕೃತಿಯಲ್ಲೂ ಮಾತು ಮಾತಿನಲ್ಲೂ ಪ್ರಕೃತಿಯ ರಸ ಜಿನುಗುತ್ತದೆ.

ಪಡುವಣ ತೀರದ ಕನ್ನಡನಾಡಿನ ಕಾರ್ಗಾಲದ ವೈಭವ ಚೆಲ್ಲಿದರೆನಿತೋ ತೀರದ ನೀರಿನ ಜಡದೇ ತಂದ ಕಾರ್ಮುಗಿಲು ಹಗಲಿರುಳೆನ್ನದೆ ಹೊಡೆಯುವ ಜಡಿಮಳೆ. ಮುಗಿಲಿನ ಹುಬ್ಬಿನಗಂಟು. ಬಾಳೆಯ ತೋರಣ. ಚಿಗುರಿನ ಜಲ್ಲರಿ ಸುರಗೆಯ ಮೊಲ್ಲೆಯ ಜಲ್ಲಿ. ಹಣ್ಣಡಕೆಯ ಹೊಂಬಾಳೆಯ ಗೊನೆ–ಇದೆಲ್ಲವು ಕವಿ ಕಂಡ ಪ್ರಕೃತಿ ಪ್ರಭಾವದ ಹಿನ್ನೆಲೆಯಲ್ಲಿ ಮೂಡಿದ ನಾಡಿನ ವೈಭವ.

ಪಡುವಣ ತೀರದ<br>
ಕನ್ನಡ ನಾಡಿನ<br>
ಕಾರ್ಗಾಲದ ವೈಭವವೇನು ?<br>
ಚೆಲ್ಲಿದರೆನಿತೊ<br>
ತೀರದ ನೀರಿನ

ಜಡದೇಹದ ಕರ್ಮುಗಿಲೇನು ?

ಈ ಮೇಲಿನ ಸಾಲುಗಳು ಕನ್ನಡ ಸಾಹಿತ್ಯ ಲೋಕಕ್ಕೆ ಚಿರಪರಿಚಿತ. ಪಡುವಣ ಕರೆಯ ಮಳೆಗಾಲದ ಚಿತ್ರಣವನ್ನು ಅತ್ಯಂತ ಸಶಕ್ತವಾಗಿ ಕಣ್ಣಿಗೆ ಕಟ್ಟಿದಂತೆ ಬರೆದವರು ಕಡೆಂಗೋಡ್ಲು ಶಂಕರ ಭಟ್ಟರು. ಅವರಿಗೆ ಕನ್ನಡ ಸಾಹಿತ್ಯದಲ್ಲಿ ದೊಡ್ಡ ಕೀರ್ತಿ ತಂದ 'ನಲ್ಮೆ' ಕಥನಕವನದ ಹೊನ್ನಿಯ ಮದುವೆಯ ಸಾಲುಗಳಿವು.

ಉತ್ತಮ ಸಾಹಿತಿಯಾಗಿ ಮತ್ತು ಪತ್ರಿಕೋದ್ಯಮಿಯಾಗಿ ಕನ್ನಡ ಸಾರಸ್ವತ ಲೋಕದಲ್ಲಿ ಕಡೆಂಗೋಡ್ಲು ತಮ್ಮ ವಿಶಿಷ್ಟ ಚಹರೆ ಮೂಡಿಸಿದರು. ಕಳೆದ ಶತಮಾನದ ಎರಡನೇ ದಶಕದ ಹೊತ್ತಿಗೆ ಬಾಲಕವಿಯಾಗಿ ಹೆಸರು ಮಾಡಿದ ಕಡೆಂಗೋಡ್ಲು ಮುಂದಿನ ದಶಕದಲ್ಲಿ ಕನ್ನಡದ ಪ್ರಬುದ್ಧ ಸಾಹಿತಿಯಾಗಿ ರೂಪುಗೊಂಡರು.

ಮೊದಲು ಪಂಡಿತಕವಿಯಾಗಿ ಕಾಣಿಸಿಕೊಂಡ ಶಂಕರ ಭಟ್ಟರ ವ್ಯಕ್ತಿತ್ವ ಆ ಚಹರೆಯಿಂದ ಬೇಗನೇ ಬಿಡಿಸಿಕೊಂಡು ಆಗ ತಾನೆ ರೂಪುಗೊಳ್ಳುತ್ತಿದ್ದ ನವೋದಯ ಕಾವ್ಯ ಮಾರ್ಗದಲ್ಲಿ ತನ್ನನ್ನು ತೆರೆದುಕೊಂಡಿತು.

ಎಲ್ಲ ದೇಶ ಕಾಲಗಳಲ್ಲಿ ಕಾಣಿಸಿಕೊಳ್ಳುವಂತೆ ಆಳುವ ಭಾಷಾ ಸಾಹಿತ್ಯವನ್ನು ಅನುವಾದಿಸುವ, ರೂಪಾಂತರಿಸುವ ತವಕ ಕಡೆಂಗೋಡ್ಲು ಅವರಲ್ಲೂ ಮೂಡಿತು. ಆದರೆ ಕವಿ ಅಲ್ಲೇ ನಿಲ್ಲದೆ ಮುಂದುವರಿದು ತಮ್ಮ ಸ್ವಂತ ನೆಲೆಯನ್ನು ಕಂಡುಕೊಂಡರು ಸಂಸ್ಕೃತ ಪ್ರಚುರ ಪಂಡಿತ ಭಾಷೆಯ ನಂಟನ್ನು ಬಲು ಬೇಗನೇ ಬಿಡಿಸಿಕೊಂಡು ದೇಸಿನುಡಿಯ ಸೊಗಸನ್ನು ಕಾವ್ಯಕ್ಕೆ ಬೆಸೆದರು ಹೊರ ಜಗತ್ತಿನ ನಿಸರ್ಗ ವ್ಯಾಪಾರವನ್ನು ಬಣ್ಣಿಸುತ್ತಲೇ ಅವುಗಳನ್ನು ಕಾವ್ಯಪ್ರಪಂಚದೊಳಗಿನ ಪಾತ್ರಗಳ ಮನೋವ್ಯಾಪಾರಕ್ಕೆ ರೂಪಾತ್ಮಕವಾಗಿ ಮಂಡಿಸುವುದು ಅವರ ಕಾವ್ಯ ವಿಶೇಷ.

ಕಾವ್ಯ ಸಂವೇದನೆ, ಭಾಷೆ, ವಸ್ತು ವಿನ್ಯಾಸ, ಸಮಕಾಲದ ಬದಲಾಗುತ್ತಿರುವ ಕಾವ್ಯ ಸಂದರ್ಭದ ಅಳವಡಿಕೆ ಈ ಎಲ್ಲಾ ಹಿನ್ನೆಲೆಯಿಂದಲೂ ಕಡೆಂಗೋಡ್ಲು ಅವರದು ಶ್ರೇಷ್ಠ ಕೃತಿ.

ಇದರೊಂದಿಗೆ ದಕ್ಷಿಣ ಕನ್ನಡ ಜಿಲ್ಲೆಯ ಜನ ವಸಾಹತು ಅನುಭವಕ್ಕೆ ಆಧುನಿಕ ಕಾವ್ಯ ಸಂದರ್ಭದಲ್ಲಿ ದಿಢೀರನೆ ಹೊಂದಿಕೊಳ್ಳಬೇಕಾದ ಸಂದರ್ಭವಿರಲಿಲ್ಲ. ಅನ್ಯಾಡಳಿತ ಮತ್ತು ಅನ್ಯಾಕ್ರಮಣವನ್ನು ಎದುರಿಸುತ್ತ ಬಂದ ಜಿಲ್ಲೆಗೆ ವಸಾಹತುಶಾಹಿಯೂ ತನ್ನ ಪರಂಪರೆಯನ್ನು ಸೃಷ್ಟಿಮಾಡಿತ್ತು. ಆದರೆ ದಕ್ಷಿಣ ಕನ್ನಡ ಜಿಲ್ಲೆಯ ಒಟ್ಟಾರೆ ಜೀವನ ಕ್ರಮ, ಸಾಮಾಜಿಕ ಗುಂಪುಗಳ ನಿರ್ಮಾಣ ಪ್ರಕ್ರಿಯೆಯಲ್ಲಿ ವಸಾಹತುಶಾಹಿಯ ಪರಿಣಾಮವಿದ್ದರೂ ಇದು ವೈಯಕ್ತಿಕ ಜೀವನದ ಮೇಲೆ ತೀವ್ರವಾದ ಪರಿಣಾಮ ಉಂಟುಮಾಡಲಿಲ್ಲ. ಈ ಅಂಶವನ್ನು ನಾವು ಗಮನಿಸಬೇಕು[೨].

ಕಡೆಂಗೋಡ್ಲು ಶಂಕರ ಭಟ್ಟರ ಕಥನ ಕವನಗಳ ಒಂದು ಗಮನಾರ್ಹ ಅಂಶವೆಂದರೆ ಸಾವು, ನೋವು ನಿರಾಶೆ ಅವರ ಮನವನ್ನು ನಿರಂತರವಾಗಿಕದಕಿದ್ದು ಕಲಕಿದ್ದು. ಕವಿಯ ಸಮಗ್ರ ಸಾಹಿತ್ಯ ಶರೀರವನ್ನು ಗಮನಿಸಿದಾಗಲೂ ಈ ಮಾತು ದಿಟವೆನಿಸುತ್ತದೆ.

'ಹೊನ್ನಿಯ ಮದುವೆ' , 'ಮಾದ್ರಿಯ ಚಿತೆ', 'ಹೆಣ್ಣು' ಈ ಕಥನಕವನಗಳ ಕೇಂದ್ರ ಬಿಂದು ಮೃತ್ಯು, ನಿರಾಸೆ. ಅದೇ ರೀತಿ 'ಮುರಲೀನಾದ' ಮತ್ತು 'ಭೂತಾಳಪಾಂಡ್ಯ' ಕಥನಕವನಗಳು ಸುಖಾಂತ ಕಂಡ ಪ್ರಸಂಗಗಳು. ಈ ಒಟ್ಟು ಕಥನಕವನಗಳ ಅಭಿವ್ಯಕ್ತಿ ಕ್ರಮದಲ್ಲಿ ಕವಿ ತೋರಿದ ಕೌಶಲ ಕನ್ನಡ ಕಾವ್ಯಪರಂಪರೆಗೆ ಅಪರೂಪವಾದುದು.

ಕೆಲವು ಬಾರಿ ಕಥೆಯ ವಸ್ತು ಗೌಣವಾದರೂ, ಕಥೆಯ ಹಿಂದಿರುವ ಭಾವದ ಬೆಳವಣಿಗೆ ಇಲ್ಲಿ ಮುಖ್ಯ. ಆದುದರಿಂದ ಭಾವನಾತ್ಮಕ ಕಥನಕವನಗಳಲ್ಲಿ ವರ್ಣನೆ ಬಂದರೂ ಅವು ಇದ್ದುದನ್ನು ಇದ್ದಂತೆ ವಿವರಿಸುವ ಗುರಿ ಹೊಂದಿರುವುದಿಲ್ಲ. ಒಂದು ಕ್ರಿಯೆಯ ಹಿಂದೆ ಕವಿ ಮನಸ್ಸು ಸ್ಪಂದಿಸಿದ ರೀತಿಯನ್ನು ವಿವರಿಸುತ್ತದೆ.

"ಒಂದು ಪ್ರಕೃತಿಯ ದೃಶ್ಯವನ್ನಾಗಲಿ, ಹಿನ್ನೆಲೆಯನ್ನಾಗಲಿ ನೇರವಾಗಿ ಚಿತ್ರಿಸದೆ ಅವುಗಳಿಂದ ಕವಿಯ ಮನಸಿನಲ್ಲಾದ ಪ್ರತಿಕ್ರಿಯೆಯನ್ನು ಭಾವವನ್ನು ಅದರೊ ದಿಗೆ ಬೆರೆಸಿ ಚಿತ್ರಿಸುವ ಈ ತೆರನಾದ ವರ್ಣನೆಗಳನ್ನು ಭಾವನಾತ್ಮಕ ವರ್ಣನೆಗಳೆಂದು ಕರೆಯಬಹುದು" ಎಂದು ಪ್ರೊ. ಅನಂತನಾರಾಯಣರು ಅಭಿಪ್ರಾಯಪಡುತ್ತಾರೆ[೩].

'ಹೊನ್ನಿಯ ಮದುವೆ' ಕಥನಕವನವು ಭಾವಗೀತೆಯನ್ನು ಕೂಡಾ ಹೋಲುತ್ತದೆ. ಪಡುವಣ ನಾಡಿನ ಕಾರ್ಗಾಲದ ಅಬ್ಬರವನ್ನು ಚಿತ್ರಿಸಿದ್ದರೆ ಅಲ್ಲಿನ ಪ್ರೇಮಿಗಳ ಮನಸ್ಸಿನ ಸಂಘರ್ಷದ ಪ್ರತಿಮೆಯೂ ಹೌದು.

ಮುಗುಳಾಗಿರೆ ಮು
ಚ್ಚುವ ನರುಗಂಪನು
ಅರಲಾದರೆ ಮುಚ್ಚಲುಬಹುದೆ ?
ಮುಗುದೆ ತನದೊಳೆದೆ
ಮುಚ್ಚಿರೆ ಹರೆಯದೆ
ತೆರೆಯದೆ ! ಅದ ನಚ್ಚಲು ಬಹುದೆ ?
ನೋಟಕೆ ಕೊಂಡುತ
ಕೂಟಕೆ ಹಿಂಗುತ
ಆಟಕೆನಾಚುತ ತೊಲಗುವ
ಸುಗ್ಗಿಯ ಮೊದಲಿನ
ಕೋಗಿಲೆ ಹುಗಿಲಿನ

ಬುಗ್ಗೆಯು ನಲು ಸೋರುವ ಚಿತ್ತ.

ಈ ಭಾಗದಲ್ಲಿ ಶರ ಷಟ್ಪದಿಯ ಗತಿ ಕಥನಕವನದ ಆವೇಗವನ್ನು ಚೆನ್ನಾಗಿ ಧ್ವನಿಸುತ್ತದೆ. ಮಾತ್ರಾಗಣಗಳಿಂದಾಗಿ ಪುಟ್ಟಪುಟ್ಟ ಪದಗಳು, ಚುರುಕಾದ ಮಾತುಗಳು, ಚಿತ್ರಗಳ ಒಳತೋಟಿಯ ಹಿಂಜುವಿಕೆ ಈ ಕಥನಕವನದ ವಿಶಿಷ್ಟತೆಗಳು.

'ಹೊನ್ನಿಯ ಮದುವೆ' ಯು ಕ್ಯಾಂಬಲ್ (Cambell) ಕವಿಯ Lord Villiam's Daughter ಎಂಬುದರಿಂದಲೂ 'ಮುರಲೀನಾದ' ಕಥನಕವನವು ಗೋಲ್ಡ್ ಸ್ಮಿತ್ ಕವಿಯ Edwin and Anjelina ಎಂಬುದರಿಂದ ತೆಗೆದುಕೊಂಡದ್ದು.

'ಹೊನ್ನಿಯ ಮದುವೆ' ದುರಂತ ಪ್ರಣಯಕತೆ. ಕತೆ ಗೌಣವಾದರೂ ಭಾವಗತಿ ಬಹಳ ತೀವ್ರವಾಗಿದೆ. ಇಲ್ಲಿ ಶರಷಟ್ಪದಿಯ ಆದಿ ಪ್ರಾಸವನ್ನು ಕಿತ್ತೆಸೆದು ೫, ೬ ನೇ ಸಾಲುಗಳಲ್ಲಿ ಅಂತ್ಯ ಪ್ರಾಸಗಳನ್ನಿಟ್ಟುಕೊಂಡಿರುವುದರಿಂದ ಹೊಸತನ ಮೂಡಿದೆ.

ಆವುದೂ ರಸದಲಿ
ಹೊಯ್ದೀ ರಾಗವ
ಮೊಗೆದಳುನುಡಿಯಲಿ ತುಂಬಿದಳು
ಹಾಡೊಳು ಸುರಿದಳು,
ಕಂಬನಿಗರೆದಳು,
ಮುಂಗಾರಿನ ತಂಬನಿಯವೊಲು.

ಕಥನಕವನದ ಈ ಸಾಲುಗಳಲ್ಲಿ ಮೂಡಿದ ಅನುಪ್ರಾಸವನ್ನು ಗಮನಿಸಬಹುದು.

ಅದೆ ರೀತಿ ಕೆಲವು ಸನ್ನಿವೇಶದಲ್ಲಿ ಕವಿ ಕಥನ ಕವನದ ಲಯವನ್ನು ಸಂಭಾವಿಸುವ ರೀತಿಯಲ್ಲಿ ನಿರೂಪಿಸಿದ್ದಾರೆ.

"ಎನ್ನೀ ರಾಗವ
ಕದ್ದವ ರಾರೆಲೆ ?
ಕೇಳುವುದಿದೋ ಪಡಿನುಡಿಯಾಗಿ !
ಕಣಿವೆಯ ಗುಮ್ಮನ
ಚೆದುರಿಸುವಾಟವೊ ?
ನೋಡುವೆ" ನೆಂದಿಳಿದಳು ಮಾಗಿ ;

ಇದೆ ತೆರನಾದ ಶೈಲಿಯು ಇನ್ನಿತರ ಕಥನಕವನಗಳಲ್ಲಿ ಮೂಡಿರುವುದನ್ನು ಕಾಣಬಹುದು.

ಭಾವಪ್ರಧಾನತೆಯೆ ಕಥನಕವನದ ಒಂದು ಗುಣ. ಆ ಹಿನ್ನೆಲೆಯಲ್ಲಿ ಮೂಡಿದ ಭಾವ ನಿರೂಪಣೆಯ ಶೈಲಿಗೆ ಈ ಕೆಳಗಿನ ಸಾಲುಗಳನ್ನು ಪ್ರಾತಿನಿಧಿಕವಾಗಿ ಗಮನಿಸಬಹುದು.

ಎನ್ನೆದೆ ಹೌವನೆ
ಹಾರಿತು ಹೊನ್ನಿಯೆ !
ಎನಗೂ ನಿನಗೂ ಬಲುದೂರ !
ಸೌಭಾಗ್ಯದ ಸಾ
ಗರದಾಚೆಯ ದಡ
ನಿನ್ನದು-ನನ್ನದು ಈ ತೀರ.

ಅದೇ ರೀತಿ

ಕೇಳುವೆಗೊಂದನು
ಸಿರಿವಂತನಸುತೆ
ಸಿರಿಯೊಂದಕೆ ಮೋಹಿಸಲಹುದೆ ?
ಹಣಕಾಸುಗಳಾಡುವ ಕೈ ಹಿಡಿದವೆ
ಮನವೂ ಹಿಡಿಯ ದೊರೆಯುವುದೆ ?

ಎಂದು ಚೆನ್ನ ಹೊನ್ನಿಯಲ್ಲಿ ಪ್ರಶ್ನಿಸುವ ಪರಿಯಲ್ಲಿ ಅಪೂರ್ವವಾದ ಭಾವ ನಿರೂಪಣೆಯಿದೆ. ಸಹೃದಯರನ್ನು ಚೆನ್ನಾಗಿ ನಾಟುತ್ತದೆ.

ಕವಿ ಕಡೆಂಗೋಡ್ಲು ಶಂಕರ ಭಟ್ಟರು ತಮ್ಮ ಕಥನಕವನಗಳಲ್ಲಿ ತೋರಿಸಿದ ಪದ ಲಾಲಿತ್ಯವೂ ಕೂಡಾ ಕಥನಕವನಗಳ ಸೊಬಗನ್ನು ಹೆಚ್ಚಿಸಿದೆ.

ಪಡುಗಡಲಿನ ತೆರೆ
ತಕ್ಕೆಯ ಸೇರುತ
ಬದ್ದನದೋ ಕವಿ ನಿದ್ದೆಯಲಿ
ನಡುವಣ ದೇಗುಲ
ದಾ ಘಂಟಾರವ
ಘಣಿ ಘಣಿಸುತಿರಲು ಕಿವಿಗಳು

ಇದರೊಂದಿಗೆ ಕಥನಕವನದ ಮತ್ತೊಂದು ಸಾಲನ್ನು ಅವಲೋಕಿಸುವುದಾದರೆ

ಮದುವೆಯ ದಿನ-ಮುಂ
ಜಾವದ ಕೋಳಿಯು
ಕೆಲೆವ ಮೊದಲೆ ಗಜಬಜವಾಯ್ತು
ಮದುಮಗಳಾವಳೂ ?
ಮೊಗವನೆ ತೋರಳು !
ಮದುವೆಯ ಗಳಿಗೆಯದೊ ! ಬಂತು
ಮೂಡನ ಬಾನನು
ನೋಡಿದರೊಮ್ಮೆಗೆ !
ಪಡುಗಡೆಯಲಿ ಕಣ್ಣಿಕ್ಕಿದರು

ಮೂಡುವ ನೇಸರ
ಮುಳುಗುವ ಚಂದ್ರನ
ನೋಡುವ ತವಕವ ಹೊಂದಿದರು

ಈ ಸಾಲುಗಳಲ್ಲಿ ಮೂಡಿದ ಪದಲಾಲಿತ್ಯವೂ ಪ್ರಮುಖವಾಗಿದೆ. ಇನ್ನು ಕಥನಕವನಗಳಲ್ಲಿ ಅಡಕವಾದ ಪ್ರಾಸಗಳ ಲಯವನ್ನು ಅವಲೋಕಿಸುವುದಾದರೆ

ಹಿನ್ನೋಟದೊಳಾ
ಚೆನ್ನನ ನೋಡುತ
ಕಣ್ಣೀರೊಂದನು ಸುರಿಸಿದಳು
ಕಟ್ಟಳೆ ಮೀರುವ
ಹೆಣ್ಣೇ ? ಎನ್ನುತ
ನಿಟ್ಟೋಟದಿ ಮನೆಸೇರಿದಳು

ಕಥನಕವನಗಳನ್ನು ಔನತ್ಯಕ್ಕೇರಿಸುವಲ್ಲಿ ಶಬ್ದಚಿತ್ರಣವೂ ಪ್ರಮುಖ ಪಾತ್ರ ವಹಿಸುತ್ತದೆ.

ಬಾಗಿಲ ಮರೆಯಲಿ
ಹೊನ್ನಿಯ ನೋಟವು
ಹೊಂಚಿತು ಮಿಂಚಿನ ವೇಗದಲಿ
ನೀಳ್ದನಿ ಮೊಳಗಿತು
ಕಂಬನಿಯುದುರಿತು
ಬಗೆಮುಸುಕಿದ ಮಳೆಗಾಲದಲಿ

ಕಥನಕವನವು ಆಧುನಿಕ ಶರಷಟ್ಪದಿಯ ಲಕ್ಷಣವನ್ನು ಹೊಂದಿದೆ ಉದಾ

ಆನೆಯ ' ನೇರಿಯೆ '
ಬಂದರು ' ಸಾಲ್ವುದು '
ಮಂಡಪ ' ದೆತ್ತರ ' – ಮೇಲಾಗಿ '
ಸಿಂಗರ ' ಬಿತ್ತರ '
ಗೈದಿಹ ' ರೆಲ್ಲರು '
ಕರೆಯದೆ ' ಬಾಂಧವ ' ರೊಂದಾಗಿ '

೪ : ೪
೪ : ೪
೪ : ೪ : ೪ + ೧ ಗುರು
೪ : ೪
೪ : ೪
೪ : ೪ : ೪ + ೧ ಗುರು

ಪ್ರೇಮದ ದಾರುಣ ಅಂತ್ಯವನ್ನು ನಿರೂಪಿಸುವ ಮಾದ್ರಿಯ ಚಿತೆ ಶಂಕರ ಭಟ್ಟರ ಸ್ವತಂತ್ರವಾದ ಕಥನಕವನ. ಪದ್ಯದ ಮೊದಲ ಭಾಗ ವಿಸ್ತಾರವಾಗಿ ಕೊನೆಯ ಭಾಗ ಮೊಟಕಾದಂತೆ ತೋರುತ್ತದೆ. ಶಂಕರ ಭಟ್ಟರು ತಮ್ಮ ವರ್ಣನೆಯ ರೀತಿಯಲ್ಲಿ ಇಂಗ್ಲೀಷ್‌ನ ಕೀಟ್ಸ್ ಕವಿಯನ್ನು ಹೋಲುತ್ತಾರೆ.

ಈ ಕಾವ್ಯದ ವಸ್ತುನಿರ್ವಹಣೆಯ ವೈಶಿಷ್ಟ್ಯವನ್ನು ಕವಿ ಗೋಪಾಲಕೃಷ್ಣ ಅಡಿಗರು ಹೀಗೆ ಅಡಕಗೊಳಿಸಿದ್ದಾರೆ.

ಈ ಕಾವ್ಯವು ಭಾವಗೀತೆಗಳದೊಂದು ರತ್ನ ಹಾರವೇ ಆಗಿರುವುದರಿಂದ ಕವಿ ಕೌಶಲ್ಯವು ಪದ್ಯ ಪದ್ಯಗಳಲ್ಲಿಯೂ ಪ್ರಕಟವಾಗಿದೆ. ಪ್ರಥಮ ಖಂಡದಲ್ಲಿರುವ ಪದ್ಯಗಳೆಲ್ಲಾ ಕವಿ ಹೃದಯದ ಮುಕ್ತಾಫಲಗಳಾಗಿದ್ದು ಕಾವ್ಯ ಶ್ರೀಯ ಪರಮಾವಸಲಿಯನ್ನು ತೋರುವಂತಿದೆ. ಯಾವ ಕವಿಗಾದರೂ ಕೀರ್ತಿ ತರುವಂತಿರುವ ಈ ಪದ್ಯಗಳ ಪ್ರಸ್ತಾವಿಕತೆಯೂ ಗಾಂಭೀರ್ಯವೂ ನಮ್ಮನು ಮರುಳುಗೊಳಿಸುವುವು[೪].

ಮಾದಿಯ ಚಿತೆ ಕಥನಕವನದ ಎರಡನೆ ಖಂಡದಲ್ಲಿ ಅಡಕವಾಗಿರುವುದು ಪಾಂಡುವಿನ ಆತ್ಮಗೀತ. ಅವನ ಅಂತರಂಗ ಸಮುದ್ರದ ಏರಿಳಿತಗಳನ್ನು ಅದರಲ್ಲೇಳುವ, ಎದ್ದು ಮಾಯವಾಗುವ ವಿವಿಧ ತರಂಗಗಳನ್ನು, ಅಂತರಂಗಗಳ ಮೇಲೆ ಕಟ್ಟುವ ಕಾಮನಬಿಲ್ಲಿನ ಚೆಲುವನ್ನು ಬಹು ಗಂಭೀರವಾದ ಮನೋಹರ ಶೈಲಿಯಲ್ಲಿ ಚಿತ್ರಿಸಿದ್ದಾರೆ.

ಕಥನಕವನದ ಮೂರನೆಯ ಖಂಡದಲ್ಲಿ ಮಾದ್ರಿಯ ಮೃದುಗಂಭೀರ ಮನೋವೃತ್ತಿಯೂ ಪ್ರತಿಕೂಲ ವಿಧಿಯೊಡನೆ ಎಂತಾದರೂ ತಾಳಿ ಬಾಳಬೇಕೆಂಬ ಅವ್ವ ಮನೋಧೈರ್ಯವೂ ಕಲಾತ್ಮಕವಾಗಿ ರೂಪಿತವಾಗಿದೆ. ಈ ಶೈಲಿಯು ಕನ್ನಡಕ್ಕೆ ಹೊಸತೆನಿಸುವಂತಿದೆ.

ಕವಿ ಹೃದಯವು ಪಾಂಡುಮಾದ್ರಿಯರ ಹೃದಯದಲ್ಲಿ ತಾದಾತ್ಮ್ಯ ಹೊ ದಿ ಅವರ ಹೃದಯಗತಿಯನ್ನೇ ಹಿಡಿದು ಹಾಡಿದಂತಿದೆ.

ನಾಲ್ಕನೆ ಖಂಡದಲ್ಲಿ ಪಾಂಡುವಿನಮರಣ, ಮಾದ್ರಿಯ ಸಹಗಮನ ಇವು ಸೂಕ್ಷ್ಮವಾಗಿ, ಸೂಚ್ಯವಾಗಿ ಸುಕ್ಷೇಪವಾಗಿಯೇ ನಿರೂಪಿತವಾಗಿದೆ.

'ಕುಸುಮ ಷಟ್ಪದಿಯ ಲಯವನ್ನು ನಾವು ಗಮನಿಸಬಹುದು.

ಚಿ ಚಿ ಚಿ ಚಿ

ಅನುಭವವು । ಸವಿಯಲ್ಲ । ಅದರ ನೆನಪೇ । ಸವಿ ಪ್ಪು

ಚಿ ಚಿ ಚಿ

ಅದ ಕದ್ದು । ಮೇಯದೆ । ಮನವೋ ।

ಪದಗಳ ಸಿರಿಯಿಂದ, ಭಾಷಾ ವೈಖರಿಯಿಂದ, ಸ್ಪಷ್ಟ ಚಿತ್ರಣದ ಕಲೆಗಾರಿಕೆಯಿಂದ, ಋತುವಿನ ಸೊಗಸನ್ನು ಕವಿ ಚೆನ್ನಾಗಿ ಶಬ್ದ ಪ್ರತಿಮೆಗಳಲ್ಲಿ ಸರ ಹಿಡಿದಿದ್ದಾರೆ. ನಾದದ ಅರ್ಥ ಅಲಂಕಾರದ ಅರ್ಥ ಪೋಷಕತ್ವ, ಅರ್ಥದ ಭಾವ ಗಾಂಭೀರ್ಯ ಸಂಬಂಧಕತ್ವ ಮತ್ತು ಭಾವಗಳ ರಸ ಪರಿಣಾಮತ್ವಗಳು ಒಂದನ್ನೊಂದು ಅನುಸ್ಯೂತವಾಗಿ ಹೊಂದಿಕೊಂಡಿವೆ[೨].

ಸುಗ್ಗಿ ಕುಣಿಯುತ ಬಂತು ಬಗ್ಗಿ ಮಾಮರ ನಿಂತು
ಹಿಗ್ಗುತಿದೆ ಕಮ್ಮಲರ ಮಕುಟವಾಂತು
ನೋಡಲಾಗದೆ ? ತುಂಬಿ ಗಾನರಸದಿಂತುಂಬಿ
ನಾಡಿಗೋಕುಳಿ ಮಾಡುತಿರುವುದಿಂತು
ಚಿತೆಯ ಬೂದಿಯ ಕೆಂಡದೊಳಗು ಪ್ರೇಮಕಾಂಡ
ಸೌಂದರ್ಯವೇ ಕಡಿದು ಸೂಸುತಿಹುದು
ಮುಗ್ಗಿ ಮುದುರಿತು ಮಾಗಿ ಚೈತನ್ಯವನು ನೀಗಿ
ಹೊಸತನದ ಋತುವಿನಲಿ ಮರೆಯಾದುದು

ಎಂಬ ಮೇಲಿನ ಸಾಲಂಕಾರದ ಪದ ಪದ್ಧತಿಯ ಸಾಂದ್ರಭಾವ ಸಮನ್ವಯವು ಅದ್ವಿತೀಯ ಸತ್ವ ತೇಜೋಬಲ ಧೃತಿಗಳಿಂದ ರಸಿಕ ಹೃದಯವನ್ನು ಹೊಡೆದೆಚ್ಚರಿಸುವಂತಹದಾಗಿದೆ. ನಿಸರ್ಗದ ಉತ್ಸಾಹ ಉತ್ಸವ, ಉತ್ಸೇಕಗಳ ಮನಂಬುಗುವ ಆಶೋತ್ತೇಜಕವಾದ ಆವರಣದಲ್ಲಿ

ಸೃಷ್ಟಿಯಂತುತ್ಸವದ ಗೊಟ್ಟಿಗುಣಿತದೊಳಿರಲು
ಎನ್ನ ಜೀವನವೊಂದು ಮೌನವಂತು
ಕಾಡ ಮೂಕತೆಗೊಂಡು, ಗವಿಯ ಕತ್ತಲೆಯುಂಡು
ಶವತಾಳಕೆ ಮೇಳ ಕೋದವದಾಯ್ತು
ಮನಕೆ ಕೂರಲಗಿಟ್ಟು ಹೊಡೆವಳಲ ಗಾಯಕ್ಕೆ
ಎನ್ನ ಮುಗುದೆಯ ಸವಿಯ ತುಟಿಯ ಮದ್ದು
ಅದುವೆ ದೊರಕದು ನನಗೆ ! ದೊರಕಿದರು ನಂಜದುವೆ !
ಅಹಹ ವಿಧಿಯೇ ! ನಂದುತಿಹ ಜೀವಿಗೆ

ಇಲ್ಲಿ ಶೈಲಿಯ ಇಷ್ಟಾರ್ಥ ವ್ಯವಚ್ಚೇದಕವಾದ ಪದಾವಳಿಯು ಇಷ್ಟರಸವನ್ನು ಅತ್ಯಂತ ಆಳವಾಗಿ ರಸಿಕರಲ್ಲಿ ಮೂಡಿಸಬಲ್ಲ ವೈದರ್ಭಿತ್ವವನ್ನುಳ್ಳದ್ದಾಗಿದೆ. ನಾದದ ಅರ್ಥ ಅಲಂಕಾರದ ಅರ್ಥ ಪೋಷಕತ್ವ, ಅರ್ಥದ ಭಾವಗಾಂಭಿರ್ಯ ಸಂಬಂಧಕತ್ವ ಮತ್ತು ಭಾವಗಳ ರಸಪರಿಣಾಮಿತ್ವಗಳು ಒಂದನ್ನೊಂದು ಅನುಸೂತವಾಗಿ ಹೊಂದಿಕೊಂಡಿವೆ[೬].

'ನಲ್ಮೆ' ಯಲ್ಲಿನ ಮತ್ತೊಂದು ಕಥನಕವನ 'ಮುರಲೀನಾದ' ಧ್ಯಾನಮಯ ಚಿಂತನೆಯ ರಸೋಲ್ಲಾಸವೇ ಇದರಲ್ಲಿ ಹರಿದಿದೆ. ಗಂಭೀರತೆಯೂ,

ಮಂದಗತಿಯುಕ್ತವೂ ಗೌರವಗರ್ಭಿತವೂ ಆದ ಒಂದು ಅಂತರಾತ್ಮಗೀತೆ. ಇದು ಇತರ ಕಥನಕವನಗಳಂತೆ ದುಃಖಾಂತವಾಗಿರದೆ ಸುಖಾಂತವಾಗಿದೆ.

ಈ ಕಥೆ ಆಲಿವರ್ ಗೋಲ್ಡ್ ಸ್ಮಿಥ್ ಕವಿಯ Edwin and Anjelina ಎಂಬ ಕಥನಕವನದಿಂದ ಪ್ರೇರಿತವಾದುದೆಂದು ಪ್ರೊ. ಅನಂತನಾರಾಯಣರು ಬರೆಯುತ್ತಾರೆ. ಮಂದಾನಿಲ ರಗಳೆಯ ಲಯದ ನಾಲ್ಕು ಮಾತ್ರೆಗಳ ಗತಿ ಕಥನ ಕಾವ್ಯಕ್ಕೆ ಚೆನ್ನಾಗಿ ಒಗ್ಗುತ್ತದೆ.

ಒಂದು ಕೃತಿಯನ್ನು ಕಾವ್ಯವೆನಿಸುವ ಲಕ್ಷಣಗಳು ಹಲವು. ಕೆಲವು ವೇಳೆ ಅವು ಭಾವದ ಸೊಗಸೆಂದು, ಕೆಲವು ವೇಳೆ ಮೂರ್ತ ಸೊಗಸೆಂದು, ಕೆಲವು ವೇಳೆ ರೀತಿಯ ಸೊಗಸೆಂದು ಕಾಣುತ್ತದೆ. ಕಾವ್ಯ ಲಕ್ಷಣಗಳೆಲ್ಲ ಈ ಮೂರು ಬಗೆಯಲ್ಲಿ ಅಡಕವಾಗುತ್ತದೆ.

ಕವಿಯೊಬ್ಬ ಭಾವಜೀವಿಯಾಗಿ ತನ್ನ ಅನುಭವದೊಂದಿಗೆ ತನ್ನ ಚಿಂತನೆಯನ್ನು ಕಾಣ್ಕೆಗಳನ್ನು ಹುಡುಕುತ್ತಾ ಸಾಗಿದಾಗ ಕಾವ್ಯಕ್ಕೆ ಒಂದು ವಿಶಿಷ್ಟ ಆಯಾಮ ಬರುತ್ತದೆ. ಇದರೊಂದಿಗೆ ಕಾವ್ಯವು ಬಹಳ ಗಂಭೀರವಾದ ಅಭಿವ್ಯಕ್ತಿ ಕೂಡಾ ಆಗಿರುತ್ತದೆ.

ಅದೇ ರೀತಿ ಕವಿಕಾಣುವ, ತೋರುವ ಹುಡುಕುವ ಪ್ರಕ್ರಿಯೆ ಕವಿಗೆ ಒಂದು ಗಂಭೀರವಾದ ಚಿಂತನಾ ವಿಧಾನ ಕೂಡಾ ಆಗಿ ಕಾವ್ಯ ಸಾಕಷ್ಟು ಸಂಕೀರ್ಣವಾದ ಪ್ರಕ್ರಿಯೆಯಾಗುತ್ತದೆ. ಆದುದರಿಂದ ಕಡೆಂಗೋಡ್ಲು ಶಂಕರ ಭಟ್ಟರ ಕಾವ್ಯ ಮತ್ತು ವಿನ್ಯಾಸ ಮೇಲುನೋಟದ ನಿರ್ಧಾರಕ್ಕೆ ಸಿಲುಕುವಂಥದ್ದಲ್ಲ. ಅವರ ವಿದ್ವತ್ತು, ಚಿಂತನೆ, ತತ್ವ ಆಳವಾದ ಪರೀಕ್ಷಣೆಯಿಂದ ಬಂದದ್ದು. ಆದುದರಿಂದ ಕಡೆಂಗೋಡ್ಲು ಶಂಕರ ಭಟ್ಟರ ಕಾವ್ಯ ವಸ್ತು ಕೆಲವು ವಿಚಾರಗಳಿಗೆ ಸೀಮಿತವಾಗಿಲ್ಲ. ಬದುಕಿನ ವಿವಿಧ ಮಗ್ಗುಲನ್ನು ಅನ್ವೇಷಿಸುವ ಮೂಲಕ ಹೊಸನಾದ, ಲಯ, ಸಂದೇಶ, ಕಾಣ್ಕೆಯನ್ನು ನೀಡಲು ಯತ್ನಿಸಿದ ಪರಿಣಾಮವಾಗಿ ಕಾವ್ಯವಸ್ತು ವೈವಿಧ್ಯಮಯವಾಗಿದೆ.

ಇದರೊಂದಿಗೆ ಕವಿಯ ಕಾಲ, ಅದು ನವೋದಯದ ಕಾಲ. ಆ ಕಾಲದ ಕವಿಗಳಲ್ಲಿ ಪ್ರಕೃತಿ ಉಪಾಸಕರು, ಅವರ ಮನಸ್ಥಿತಿ, ಕಾಲಧರ್ಮ, ಯುಗಧರ್ಮ ಎಲ್ಲವೂ ಒಂದಕ್ಕೊಂದು ಪೂರಕವಾದುದು. ಪಾಶ್ಚಾತ್ಯರಂತೆ ನಮ್ಮಲ್ಲಿ ಕೈಗಾರಿಕಾ ಕ್ರಾಂತಿ ಆಗಿರಲಿಲ್ಲ. ಹಾಗಾಗಿ ಜೀವನದ ಧೋರಣೆ ತೀರ ನಯವಾದುದು, ಮೃದುವಾದುದು, ನಯ, ವಿನಯ, ನಂಬಿಕೆ, ಬಾಂಧವ್ಯ ದೇಶ ಭಕ್ತಿ, ದೈವ ಭಕ್ತಿ ಇವೆಲ್ಲವೂ ಕೂಡಾ ಸಂದರ್ಭಾನುಸಾರ ಒಡಮೂಡಿದೆ.

ಕಡೆಂಗೋಡ್ಲು ಶಂಕರ ಭಟ್ಟರ ಕಥನಕವನಗಳನ್ನು ಕೇವಲ ಕಲಾತ್ಮಕ ಚಟುವಟಿಕೆ ಎಂದು ತಿಳಿಯಬಾರದು. ಸಂಸ್ಕೃತಿಯ ಮತ್ತು ತಾವು ಅಂಥ

ಸಂಸ್ಕೃತಿಯ ಪ್ರತಿನಿಧಿಗಳೆಂದು ನಂಬಿದ ಕವಿಗಳ ಅಧ್ಯಯನ ಮಾಡ ಹೊರಟಾಗ ಕಾವ್ಯ ಮತ್ತು ಕವಿಗಳಿಬ್ಬರನ್ನು ಕುರಿತ ಚರ್ಚೆಯೂ ಪ್ರಸ್ತುತ.

ಸಾಹಿತ್ಯ ಪರಂಪರೆಯಲ್ಲಿ ಕವಿಯು ತನ್ನದಾಗಿಸುವ ಅಂಶಗಳು ಅವನ ಕಾಲದ ಸಾಂಸ್ಕೃತಿಕ ಒಲವುಗಳಿಂದ ನಿರ್ದೇಶಿತವಾಗುವಂತೆ ತೋರುತ್ತದೆ. ಕವಿಯ ಕಾವ್ಯಾಭಿವ್ಯಕ್ತಿ ಅವನ ಆಳವಾದ ಸುಪ್ತ ಮನಸ್ಸಿನ ಚಿಂತನೆಗಳಲ್ಲಿ ಆಕಾರ ಪಡೆಯುವುದು ಬಾಲ್ಯದ ಪರಿಸರ ಮತ್ತು ಬದುಕಿನ ಸಂದರ್ಭಗಳ ಪ್ರಭಾವದಿಂದಾಗಿ. ಕಡೆಂಗೋಡ್ಲು ಅವರದು ಕಾವ್ಯಕೇಂದ್ರಿತವಾದ ಜಗತ್ತು. ತಾವು ಮಾಡಬೇಕಾದ್ದನ್ನೆಲ್ಲ ಹೇಳಬೇಕಾದುದನ್ನೆಲ್ಲ ಕವಿತೆಯ ಮೂಲಕವೇ ಹೇಳಿದ್ದಾರೆ ಮತ್ತು ಯಶಸ್ಸು ಪಡೆದಿದ್ದಾರೆ ಎನ್ನಬಹುದು.

ಗಮನಿಸಲೇಬೇಕಾದ ಅಂಶವೆಂದರೆ ಕಥನಕವನದಲ್ಲಿ ಪ್ರೇಮದ ಸಫಲ ಚಿತ್ರಗಳು ಇರುವುದಕ್ಕಿಂತ ಹೆಚ್ಚಾಗಿ ವಿಫಲತೆಯ, ನೋವಿನ, ಸೋಲಿನ ಚಿತ್ರಗಳು ಹೆಚ್ಚಾಗಿದೆ. ಆ ಅನುಭವಗಳು ಕೊಡಬಹುದಾದ ಸುಳಿವು ಆದರ್ಶದ ನೆಲೆಯ ಆಶಾಚಿಂತನೆಯಂತೆ ಕಾಣಿಸಿದರೆ, ವಿಷಾದ ಮಾತ್ರ ಮತ್ತೆ ಮತ್ತೆ ಬರುವ ಗ್ರಹಿಕಾ ಸತ್ಯವಾಗಿದೆ. ಕವಿಯ ಕಥನಕವನದಲ್ಲಿ ಸುಖದ ಶಿಖರಗಳೇನಿದ್ದರೂ ನೋವಿನ ಸಮರದಿಂದ ಅಪರೂಪಕ್ಕೆಂಬಂತೆ ಚಿಮ್ಮುವ ಸಂಗತಿ.

ಇದರೊಂದಿಗೆ ಕಥನಕವನದ ಪಾತ್ರಗಳ ಮುಖ್ಯ ವಿಧಾನವೆಂದರೆ ಎಲ್ಲಾ ಕಡೆಯೂ ಹೆಣ್ಣನ್ನು ಉದಾತ್ತೀಕರಿಸುವ ಮತ್ತು ಆ ಮೂಲಕ ಅವಳನ್ನು ಮಾನವೀಕರಣಗೊಳಿಸಿ ಅವಳಿಂದ ಸಲ್ಲದ ಎತ್ತರಗಳನ್ನು, ತ್ಯಾಗಗಳನ್ನು ನಿರೀಕ್ಷಿಸುವ ಯತ್ನವೂ ನಡೆದಿದೆ.

ನವೋದಯ ಕಾಲದ ಭಾಷೆ ಎನ್ನಬಹುದಾದ ಸರಳ, ಸಹಜ, ಲಯ, ಗೇಯತೆ ಮಾಧುರ್ಯಗಳನ್ನು ಕಡೆಂಗೋಡ್ಲು ಶಂಕರ ಭಟ್ಟರು ಸರಳ ಅರ್ಥ ಗರ್ಭಿತವಾಗಿ ಕಥನ ಕವನದಲ್ಲಿ ನಿರೂಪಿಸಿದ್ದಾರೆ. ಕವಿಯ ಸ್ವಂತಿಕೆಯ ಜಾಣ್ಮೆ ಕಥನಕವನದುದ್ದಕ್ಕೂ ಒಡಮೂಡಿದೆ.

ಬದುಕಿನ ಸಾಮಾನ್ಯ ಸಂಗತಿಗಳನ್ನು ಅದರೊಂದಿಗೆ ಆ ಬದುಕಿನ ಸಂಕೀರ್ಣತೆಗಳನ್ನು ಕಾವ್ಯದಲ್ಲಿ ತಂದು ಅಭಿವ್ಯಕ್ತಿಸುವುದು ಸುಲಭವಲ್ಲ. ಒಂದು ದೊಡ್ಡ ಸವಾಲೇ ಸರಿ. ಕವಿ ಕಡೆಂಗೋಡ್ಲು ಅದನ್ನು ಸಾಧಿಸಿದ್ದರು ಎನ್ನಬಹುದು. ಕವಿಯಾಗಿ ವಸ್ತುವಿಗೆ ಪ್ರಾಧಾನ್ಯತೆ ಕೊಟ್ಟಿದ್ದರು ಎನ್ನುವುದನ್ನು ಗಮನಿಸಬೇಕು.

ಬಳಸಿದ ಭಾಷೆ ಸರಳವಾದುದು ನಿಜ. ಇದರೊಂದಿಗೆ ಬಹುಪಾಲು ಮಧ್ಯಮವರ್ಗದ ವಿದ್ಯಾವಂತರು ಬಳಸುವ ಭಾಷೆ. ಆದರೆ ಅದು ತೀರಾ ಸಾಮಾನ್ಯರನ್ನು ಮುಟ್ಟಿದೆ ಮತ್ತು ಆಕರ್ಷಿಸಿದೆ. ಕನ್ನಡದ ಬಹುತೇಕ ಕವಿಗಳಂತೆ ತನ್ನ ಕಾವ್ಯ ಭಾಷೆಯ ವಿಚಾರದಲ್ಲಿ ಖಚಿತತೆಯನ್ನು, ಎಚ್ಚರಿಕೆಯನ್ನು ವಹಿಸಿದ್ದರೆನ್ನುವುದನ್ನು ಮರೆಯುವಂತಿಲ್ಲ. ಕವಿ ಕಡಕೆಂಗೋಡ್ಲು ಅವರ ಭಾಷೆಗೆ ಅವರದ್ದೇ ಆದ ಸ್ಪರ್ಶವಿದೆ. ಇದರೊಡನೆ ಅವರ ಕಲೆಗಾರಿಕೆಯೂ ಸ್ಪಷ್ಟವಾಗುತ್ತದೆ.

ಸಂಕೀರ್ಣವಾದ ಭಾಷೆಯನ್ನು ಬಳಸುವ ಸಂದರ್ಭದಲ್ಲೂ ಅವರು ಅದರಲ್ಲೂ ಸಾಧ್ಯವಾದಷ್ಟು ಜನ ಸಾಮಾನ್ಯರಿಗೆ ಹತ್ತಿರವಾಗುವ ಧಾಟಿಯನ್ನೇ ಬಳಸಲು ಯತ್ನಿಸಿದ್ದಾರೆ ಎನ್ನಬಹುದು. ಆದುದರಿಂದ ಭಾಷೆಯು ಕಡೆಂಗೋಡ್ಲು ಅವರ ಕಥನಕವನಗಳಲ್ಲಿ ಸಮುದಾಯದ ಭಾಷೆಯಾಗಿ ಬೆಳೆದಿದೆ. ತನ್ನದೇ ಆದ ಒಂದು ಭಾವಮಯವನ್ನು ನಿರ್ಮಿಸಿಕೊಂಡಿದೆ. ಸಂವಹನದ ಸಂದರ್ಭಕ್ಕೆ ತೊಡಕುಗಳು ಏಳುವುದಿಲ್ಲ.

ಉದಾ :ಹೆಣ್ಣು ಕಥನಕವನದ ಸಾಲುಗಳನ್ನು ಗಮನಿಸಿದಾಗ

ಪೂರ್ವಕರ್ಮದಂತೆ ಗೌಡ
ಹೊಂಚುತ್ತಿದ್ದ ; ಚಲಿದ ಬಲಿದ
ಧನಿಕತೆಯನು ನೆಮ್ಮಿ ನಿಂತು
ನಿತ್ಯ ಹಿಂಸೆ ಮಾಡುತ್ತಿದ್ದ
ಸಹಿಸುವಷ್ಟು ಸಹಿಸಿ, ತಾಳ್ಮೆ
ಬತ್ತಿ ಹೋಗುತಿರಲದೊಮ್ಮೆ
ನಯದ ಭಯದ ಭಾಷೆಯಲ್ಲಿ
ಗದ್ಗದಿಸುತ ವಿರಮಿಸಿದಳು.

ಈ ಸಾಲುಗಳಲ್ಲಿ ಕಡಿಮೆ ಶಬ್ದಗಳೊಂದಿಗೆ ಸುಂದರವಾದ ಭಾಷಾ ಶೈಲಿಯಿಂದ ಹೆಣ್ಣು ನಯವಾಗಿ ಪ್ರತಿಭಟಿಸುವುದನ್ನು ಚಿತ್ರಿಸಿದ್ದಾರೆ.

ಇದರೊಡನೆ ಇದೇ ಕಥನಕವನದ ಕೆಳಗಿನ ಸಾಲುಗಳನ್ನು ಗಮನಿಸಬಹುದು.

ಗಂಟಲೊಣಗುವಷ್ಟು ಹೃದಯ
ಒಡೆಯುವಷ್ಟು, ಚೇತನಗಳ
ದೆಸೆ ದೆಸೆಗೆ ತೊನೆಯುತಿರುವ
ಪ್ರಾಣ ತಂತು ಕಡಿಯುವಷ್ಟು
ಅತ್ತು ಅತ್ತು ಹಮ್ಮಯಿಸುತ,
ಸತ್ತು ಸತ್ತು ಚೇತರಿಸುತ
ಧ್ಯಾನಗೊಂಡು, ಮೌನಗೊಂಡು
ಇದ್ದಳಾಕೆ ತನ್ನ ಕಂಡು

ಕವಿಭಾಷೆಯ ಬಳಕೆಯಲ್ಲಿ ಹಾಗೂ ವಸ್ತುವಿನ ನಿರೂಪಣೆಯಲ್ಲಿ ತಂದ ಹೊಸತನ, ಸ್ವಾತಂತ್ರ್ಯ ಹಾಗೂ ವ್ಯಕ್ತಪಡಿಸಿದ ಅಪೂರ್ವ ಸಂಯಮ ಇವುಗಳಿಂದ ಕಥನಕವನಗಳು ಹಿರಿತನ ಪಡೆದಿದೆ.

ಶಂಕರ ಭಟ್ಟರ ಕಾವ್ಯ ಧೋರಣೆಯು ಮೂಲತಃ ರೋಮ್ಯಂಟಿಕ್ ಆದರೂ, ಅದನ್ನು ಒಡೆದು ಇನ್ನೊಂದು ಪ್ರಪಂಚಕ್ಕೆ ಕಾಲಿಡುವ ಇಚ್ಚೆ ಅವರಿಗಿಲ್ಲವಾದರೂ

ತನ್ನ ಧೋರಣೆಯು ಎಲ್ಲಿಯೂ ಉಬ್ಬರಿಸಿಕೊಳ್ಳದ ಹಾಗೆ ಅವರು ಜಾಗ್ರತೆ ವಹಿಸುತ್ತಾರೆ. ಭಾವೋದ್ರೇಕದ ಶಿಖರವನ್ನೇರಬಹುದಾದ ಸನ್ನಿವೇಶಗಳನ್ನೆಲ್ಲ ಅರ್ಥವತ್ತಾದ ಮೌನದ ಮೂಲಕ, ನಾಟಕೀಯತೆಯ ಮೂಲಕ, ವ್ಯಂಗ್ಯದ ಮೂಲಕ, ಪ್ರತಿ ಮಾತುಗಳ ಬಳಕೆಯ ಮೂಲಕ ಗಟ್ಟಿನೆಲಕ್ಕೆಳೆದು ತಂದುನಿಲ್ಲಿಸುವ ಅವರ ಪ್ರಯತ್ನ ಗಮನಾರ್ಹ[೭].

ನೀರೆನೋಟದಲಿ ನಿರಾಶೆ
ಗೆಲುವು ಗುಡಿಯನ್ನೆತ್ತಿರುವುದು
ಮುದ್ದು ಮಗನ ಹಾಸದಲ್ಲಿ
ಭಂಗುರತೆಯ ಬತ್ತಿರುವುದು
ಸತ್ಯವಿದನು ಕಾಣದವನೆ ?
ಕಂಗಳಿದ್ದು ಕುರುಡನೇನೋ ?
ಗುಡಿಯ ದೇವರಂತೆ ಮಾರ
ಕಡೆದ ಕಲ್ಲ ಮೂರ್ತಿಯೇನೋ ?

ಎಂಬಲ್ಲಿ ಯುದ್ಧಕ್ಕೆ ಹೊರಟುನಿಂತ ಮಾರ ತನ್ನ ವ್ಯಸನಾವೃತ ಪತ್ನಿಗೆ ನಾಲ್ಕು ಸಾಂತ್ವನದ ಮಾತುಗಳನ್ನಾಡಿದಾಗ ಆಕೆ ಸೂಚಿಸುವ ಮೌನ, ರಾಯಸಿಗರು ಬಂದು ಮಾರನ ಮರಣವಾರ್ತೆಯನ್ನು ತಿಳಿಸಿದಾಗ ಆಕೆ ಮಾತಿಲ್ಲದೆ ಸ್ತಂಭೀಭೂತಳಾಗುತ್ತಾಳೆ.

ಮಾತ ಕೇಳುತಿದ್ದಾಳೆಂತೊ
ಕೇಳಿಸಹಿಸುತ್ತಿದ್ದಳೆಂತೋ
ಗಾಳಿಯೊಳಗದೃಶ್ಯಳಾಗಿ
ಬಿಸಿಲಿನಲ್ಲಿ ಬೆಂಕೆಯಾಗಿ
ಧೂಲಿನಲಿ ಕಣಗಳಾಗಿ
ಮಂಜಿನಲ್ಲಿ ತುಂತುರಾಗಿ
ನಾದದ ಪರಮಾಣುವಾಗಿ
ಮಾಯವಾಗದಿದ್ದಾಳೆಂತೋ !
ಊರವರು ಬಂದು ಸಾಂತ್ವನದ ನುಡಿಗಳನ್ನಾಡಿದಾಗ
ಹಲವು ಬಾರಿ ಪಾಕಗೊಂಡ
ಹಳೆಯ ಮಾತು ; ಹಳಸು ತುತ್ತು !
ತಿಮ್ಮ ಗೌಡ ತೊಳಸಿ ನೋಡಿ
ಬಡಿಸುತಿರಲು ಹೊಲದ ನಾರಿ
ಎಮ್ಮಗೋಳ ನಮಗೆ ಬಿಡಿರಿ
ಕಣ್ಣ ನೀರ ತೊರೆದು ಬಿಡಿರಿ
ಎನುತೆ ದಾರಿ ತೋರಿಸಿದಳು

ತನ್ನೆ ತಾನೆ ಎಬ್ಬಿಸಿದಳು

ಹೆಣ್ಣಿನ ನೋವನ್ನು ಕಟ್ಟಿಕೊಡುವ ಭಾಷೆ, ತಿಮ್ಮಗೌಡನು ಅವಳಲ್ಲಿಗೆ ಬಂದು ಹಣೆಯಬರಹಗಳನ್ನು ಜರೆದು ಮಾತುಗಳನ್ನು ಬರೆಸುತಿಹನು ! ಎಂದುಸೂಚಿಸುವಲ್ಲಿ ವ್ಯಕ್ತವಾಗುವ ವ್ಯಂಗ್ಯ ಇವೆಲ್ಲ ಕವಿಯ ನಿಜವಾದ ಕಾವ್ಯ ಪ್ರಜ್ಞೆಗೆ ಸಾಕ್ಷಿಗಳು.

ಬಳಸಿಕೊಂಡ ಛಂದೋಲಯಗಳೂ ಕಥನಕವನದ ಸತ್ವವನ್ನೆತ್ತಿ ತೋರಿಸುವಲ್ಲಿ ಅರ್ಥಪೂರ್ಣವಾಗಿಸುವಲ್ಲಿ ವಿಫಲವಾಗಿವೆ ಎನ್ನಬಹುದು. ಮೂರು ಮಾತ್ರೆಗಳ ನಾಲ್ಕು ಗಣಗಳ ಸಾಲುಗಳುಳ್ಳ ಅಷ್ಟ ಪದಿಯಲ್ಲಿ ಈ ದೀರ್ಘ ಕವನವು ನಿರೂಪಿತವಾಗಿದೆ.

ವಸ್ತುವಿನ ಭಾವದ ಏರಿಳಿತಗಳಿಗನುಗುಣವಾದ ಛಂದೋವೈವಿಧ್ಯವಾಗಲಿ, ಲಯ ವೈವಿಧ್ಯವಾಗಲೀ ಇಲ್ಲದೆ ಉದ್ದಕ್ಕೂ ಏಕರೀತಿಯಲ್ಲಿ ಹರಿಯುವ ಮೂರು ಮಾತ್ರೆಗಳ ಗಣಗಳ ನಡೆಯು ಓದುಗರಿಗೆ

ಏಕತಾನತೆಯ ಅನುಭವವನ್ನು ಮೂಡಿಸಬಹುದು. ಈ ಲಯವೂ ಇಲ್ಲಿನ ಮಿಶ್ರಭಾವವಾದ ವಿಷಾದಕ್ಕೆ ಅನುಗುಣವಾಗಿರದೆ, ಉತ್ಸಾಹವನ್ನು ನೀಡುವಂಥದ್ದಾಗಿದೆ.

ಇಷ್ಟಲ್ಲದೆ ಕಥನಕವನದ ಪಾತ್ರಗಳು ವಿಚಾರ ಮಾಡುವ, ತರ್ಕಿಸುವ ರೀತಿಯೂ ವಿಷಯದ ಧೋರಣೆಗೆ ವಿಮುಖವಾಗಿ ನಿಲ್ಲುತ್ತದೆ. ಈ ಕಥನ ಕವನದಲ್ಲಿ ವ್ಯಂಗ್ಯ, ನಾಟಕೀಯತೆ – ವಾಸ್ತವಗಳೆಲ್ಲ ತನ್ನದೇ ಆದ ರೀತಿಯಲ್ಲಿ ಪ್ರವಹಿಸಿವೆ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಶಂಕರ ಭಟ್ಟರ ಕಥನ ಕವನಗಳಿಗೆ ಕಾವ್ಯ ಮಾರ್ಗಕ್ಕೆ ಒಂದು ವಿಶಿಷ್ಟ ಸ್ಥಾನವಿದೆ. ಭಾಷೆಯಲ್ಲಿ ಸ್ಪಷ್ಟತೆ, ಭಾವದಲ್ಲಿ ಉತ್ಕೃಷ್ಟತೆ ಇದೆ. ಶಬ್ದಾರ್ಥಗಳೆರಡೂ ಸಮರಸವಾಗಿ ಬೆರೆತು ಬಂದಿದೆ. ಮೊದಲಿಂದ – ಅಂತ್ಯದವರೆಗೂ ಕಥನಕವನಗಳಲ್ಲಿ ಬಿಗಿಯೂ, ಹಿಡಿತವೂ ಎಲ್ಲಿಯೂ ಸಡಿಲಗೊಂಡಿಲ್ಲ. ಉತ್ತಮವಾದ ಸಂಯೋಜನೆಯಾಗಿದೆ. ಹೊಸತನವೆಂಬುದು ವಿವೇಕದೊ ದಿಗೆ ಮೂಡಿ ಕವಿ ಪ್ರತಿಭೆಯ ಪ್ರತೀಕವಾಗಿದೆ. ಅದಲ್ಲದೆ ಅಪ್ರಸ್ತುತವಾದ ಅಶುದ್ಧ ಅಸಹಜ ವಾಕ್ಸರಣಿಯಾಗಲೀ ಛಂದೋ ಭಂಗ ದೋಷವಾಗಲೀ ಶ್ರುತಿ ಕಟುತ್ವವಾಗಲೀ ಬರಲಿಲ್ಲ.

ಕವಿ ಪಾತ್ರಗಳ ಮೂಲಕ ಆಡಿಸಿದ ಮಾತು ನಮ್ಮ ಸಂಸ್ಕೃತಿಗೊಪ್ಪುವ ಮಾತು. ಶೈಲಿ – ಕನ್ನಡದ ಶೈಲಿ ; ಭಾವ – ಶುದ್ಧ, ಸ್ವತಂತ್ರ ಸುಂದರ ಹೀಗಾಗಿ ಕವಿ ಕಡೆಂಗೋಡ್ಲು ಶಂಕರ ಭಟ್ಟರ ಕಾವ್ಯ ಮಾರ್ಗವು ಪ್ರಸ್ತುತ ಕವಿಗಳಿಗೂ ಮಾರ್ಗದರ್ಶಕವಾಗುವಂತಿದೆ. ಅವರ ನಿಜವಾದ ಕಾವ್ಯಸಿದ್ಧಿಯನ್ನು ಅವರ ಈ ಖಂಡಕಾವ್ಯಗಳಲ್ಲಿ ನಾವು ಗುರುತಿಸಬಹುದು. ಮಾನವೀಯ ಸಂದರ್ಭವೊಂದರಲ್ಲಿ ಅಡಕವಾದ ಭಾವಸಂಪತ್ತನ್ನೆಲ್ಲ ಸಮರ್ಥವಾಗಿ ಅವರ ಕಾವ್ಯಶಕ್ತಿ

ಸೂರೆಗೊಳ್ಳಬಲ್ಲದು. ಆದುದರಿಂದ ಕಡೆಂಗೋಡ್ಲು ಶಂಕರ ಭಟ್ಟರ ಕಥನಕವನಗಳಲ್ಲಿ ನಿಸರ್ಗದ ಭಾವ ಸಂಪತ್ತಿನ ಜೊತೆ - ಬದುಕಿನ ನಾನಾ ಮುಖಗಳು ಬವಣೆಗಳು ಅನುಭವಗಳಾಗಿ ಪ್ರಕಟಗೊಳ್ಳುವ ಬಗೆಯನ್ನು ನಾವು ಕಾಣಬಹುದಾಗಿದೆ.

**ಟಿಪ್ಪಣಿಗಳು :-**

೧. ಸತ್ಯನಾರಾಯಣ ಮಲ್ಲಿಪಟ್ಟಣ ಪುಟ ೯, ದಕ್ಷಿಣ ಕನ್ನಡದ ಕಾವ್ಯ ಮತ್ತು ಪ್ರಾದೇಶಿಕತೆ ಪ್ರಸಾರಾಂಗ - ಮಂಗಳೂರು ವಿಶ್ವವಿದ್ಯಾನಿಲಯ ೧೯೯೯

೨. ಅದೇ ಪುಟ, ೮

೩. ಅನಂತ ನಾರಾಯಣ ಕೆ.ಎಸ್. ಪುಟ ೩೨೫ ಹೊಸಗನ್ನಡ ಕವಿತೆಯ ಮೇಲೆ ಇಂಗ್ಲೀಷ್ ಕಾವ್ಯ ಪ್ರಭಾವ ಡಿ.ವಿ.ಕೆ. ಮೂರ್ತಿ, ಮೈಸೂರು ೧೯೭೭

೪. ನಾವಡ ಎ.ವಿ. ಪುಟ ೧೫, ನವೋದಯದ ಕೋಗಿಲೆ, ಕಡಂಗೋಡ್ಲು ಶಂಕರ ಭಟ್ಟ ಕನ್ನಡ ಸಂಘ ಕಾಂತಾವರ ೨೦೦೯

೫. ಅದೇ ಪುಟ ೧೫

೬. ಶ್ರೀಧರ ಬಿ.ಹೆಚ್. ಪುಟ ೧೬೨ ಅಭಿಜಾತ ಕೃತಿ ನಲ್ಮೆ ವಾಂಙ್ಮಯ ತಪಸ್ವಿ ಕಡೆಂಗೋಡ್ಲು ಶಂಕರ ಭಟ್ಟರ ಅಭಿನಂದನಾ ಗ್ರಂಥ ಸಂಪಾದಕರು : ನಾವಡ ಎ.ವಿ. ಡಿ.ವಿ.ಕೆ. ಮೂರ್ತಿ - ಮೈಸೂರು ೧೯೭೭

೭. ಸುಬ್ರಾಯ ಚೊಕ್ಕಾಡಿ ಪುಟ ೧೮೩ ಶಂಕರ ಭಟ್ಟರ ಕಥನಕವನ ಹೆಜ್ಜು ವಾಂಙ್ಮಯ ತಪಸ್ವಿ ಕಡೆಂಗೋಡ್ಲು ಶಂಕರ ಭಟ್ಟ ಸ್ಮಾರಕ ಗ್ರಂಥ ಸಂಪಾದಕರು : ನಾವಡ ಎ.ವಿ. ಡಿ.ವಿ.ಕೆ. ಮೂರ್ತಿ - ಮೈಸೂರು ೧೯೭೭

# ಉಪಸಂಹಾರ

ಅನುಭವದ ಸುಮದರವಾದ ಅಭಿವ್ಯಕ್ತಿಯೇ ಸಾಹಿತ್ಯ. ಹಾಗಾಗಿ ಸೃಜನಶೀಲ ಕವಿಯಾದವನು ತನ್ನ ಅನುಭವಗಳನ್ನು ಇದರೊಂದಿಗೆ ಲೋಕಾನುಭವಗಳನ್ನು ಸಾಹಿತ್ಯ ರೂಪಕ್ಕಿಳಿಸುತ್ತಾನೆ.

ಕಡೆಂಗೋಡ್ಲು ಶಂಕರ ಭಟ್ಟರು ಕವಿ, ಮಾತ್ರವಲ್ಲದೆ ಪತ್ರಕರ್ತರಾಗಿ, ಸರ್ಜನಶೀಲ ಅಧ್ಯಾಪಕರಾಗಿ ಪ್ರಸಿದ್ಧರಾದವರು. ಕನ್ನಡದ ಸಾಹಿತ್ಯ ಪ್ರಪಂಚಕ್ಕೆ ಮಹತ್ತರ ಕೊಡುಗೆ ನೀಡಿದ ಕವಿ ಕಡೆಂಗೋಡ್ಲು ಶಂಕರ ಭಟ್ಟರ ದೀರ್ಘ ಕಥನಕವನಗಳನ್ನು ಮಾತ್ರ ಈ ಪ್ರಬಂಧದಲ್ಲಿ ಅಧ್ಯಯನ ಮಾಡಲಾಗಿದೆ.

೧೯೩೨ ರ ದಶಕದಲ್ಲಿ ಬಂದ 'ನಲ್ಮೆ' ಕಥನ ಕವನ ಸಂಕಲನದಲ್ಲಿ 'ಹೊನ್ನಿಯ ಮದುವೆ', 'ಮಾದ್ರಿಯ ಚಿತೆ' ಮತ್ತು 'ಮುರಲೀ ನಾದ' ಎಂಬ ಮೂರು ನೀಳ್ಗವಿತೆಗಳಿವೆ. ಅಲ್ಲದೆ ಪ್ರತ್ಯೇಕವಾಗಿ ಪ್ರಕಟವಾದ 'ಹೆಣ್ಣು' ಮತ್ತು ಭೂತಾಳ ಪಾಂಡ್ಯ ಕಥನಕವನಗಳನ್ನು ಈ ಪ್ರಬಂಧದಲ್ಲಿ ಅಧ್ಯಯನ ಮಾಡಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಕಡೆಂಗೋಡ್ಲು ಶಂಕರ ಭಟ್ಟರ ಕಥನಕವನಗಳ ಅಧ್ಯಯನಕ್ಕೆ ಪೂರಕವಾಗಿ ಅಧ್ಯಯನದ ಮಹತ್ವ, ವ್ಯಾಪ್ತಿ ವಿಧಾನದ ಕುರಿತು ಸ್ಪಷ್ಟಪಡಿಸಲಾಗಿದೆ. ಕನ್ನಡ ಕಾವ್ಯಗಳು ವಿವಿಧ ರೂಪಗಳಾಗಿ ಚರಿತ್ರೆಯಲ್ಲಿ ರೂಪುಗೊಂಡಂತೆ ಕಥನಕವನಗಳ ರೂಪದಲ್ಲೂ ಬೆಳೆದು ಬಂದವು ಎನ್ನುವುದನ್ನು ಪ್ರತಿಪಾದಿಸಲಾಗಿದೆ.

ನವೋದಯದ ಕಾಲದ ಆರಂಭದಲ್ಲಿನ ಸಾಹಿತ್ಯ ಸ್ವರೂಪವನ್ನು ವಿವೇಚಿಸಿ ಕವಿಯ ಹಿನ್ನೆಲೆಗೆ ದೇಶಕಾಲಗಳು ನೀಡಿದ ಪ್ರಭಾವವನ್ನು ವಿವೇಚಿಸಲಾಗಿದೆ. ಇದರೊಂದಿಗೆ ಕಡೆಂಗೋಡ್ಲು ಶಂಕರ ಭಟ್ಟರ ಕಥನಕವನಗಳ ಬಗ್ಗೆ ಸೂಚ್ಯವಾದ ಆಧಾರ ಮತ್ತು ಚಿಂತನೆಯಿಂದ ಸಮಗ್ರವಾಗಿ ಅಧ್ಯಯನ ಮಾಡಲಾಗಿದೆ.

ಕಥನಕವನಗಳು–ಹಿನ್ನೆಲೆ–ಸ್ವರೂಪ– ಈ ಅಧ್ಯಾಯದಲ್ಲಿ ಕಥನಕವನಗಳ ಸಂಕ್ಷಿಪ್ತ ಇತಿಹಾಸ, ಪ್ರೇರಣೆ ಮತ್ತು ಕಥನ ಕವನಗಳ ವಿಶೇಷತೆ ಇದರೊಂದಿಗೆ ಆಂಗ್ಲ ಸಾಹಿತ್ಯದಿಂದ ಪ್ರೇರಣೆಗೊಂಡು ಕನ್ನಡದಲ್ಲೂ ಕಥನಕವನಗಳ ಪರಂಪರೆ ಬೆಳೆದುಬಂತು ಎನ್ನುವುದನ್ನು ಪ್ರತಿಪಾದಿಸಲಾಗಿದೆ. ಕಥನಕವನಗಳಿಗೆ ನಮ್ಮ ಕವಿಗಳು ನೀಡಿದ ಕೊಡುಗೆಗಳನ್ನು ಚರ್ಚಿಸಲಾಗಿದೆ. ಆ ಮೂಲಕ ಕವಿ ಕಡೆಂಗೋಡ್ಲು ಶಂಕರ ಭಟ್ಟರ ಕಥನಕವನಗಳು ಹೇಗೆ ಸಾಹಿತ್ಯ ಪ್ರಕಾರದಲ್ಲಿ ಭಿನ್ನವಾಗಿ ನಿಲ್ಲುತ್ತವೆ ಎನ್ನುವುದನ್ನು ತಿಳಿಸಲಾಗಿದೆ.

ಅಧ್ಯಾಯ ಮೂರರಲ್ಲಿ ಕವಿ ತಮ್ಮ ಕಥನಕವನಗಳಲ್ಲಿ ಸೃಷ್ಟಿಸಿದ ಸ್ತ್ರೀ ಪಾತ್ರಗಳು ಅವುಗಳ ಅಂತರಾಳ, ನಿರ್ಧಾರ ವಿವೇಚನೆ, ಆಸೆ ಒಳನೋಟಗಳನ್ನೆಲ್ಲಾ ಸ್ಥೂಲವಾಗಿ ಅವಲೋಕಿಸಲಾಗಿದೆ.

ಸಂಪ್ರದಾಯ, ಯುಗಧರ್ಮಗಳ ಪ್ರಭಾವ ಸ್ತ್ರೀ ಪಾತ್ರ ಸಂವೇದನೆಯಲ್ಲಿ ಹೇಗೆ ಅಡಕವಾಗಿದೆ ಪುರುಷ ಪ್ರಾಬಲ್ಯ ಸಮಾಜದಲ್ಲಿ ಸ್ತ್ರೀಯ ಸ್ಥಿತಿಗತಿಗಳು ಹೇಗಿರುತ್ತವೆ ಎನ್ನುವುದನ್ನು ಕಥನಕವನಗಳ ವಿವಿಧ ಸ್ತ್ರೀ ಪಾತ್ರಗಳಾದ 'ಹೊನ್ನಿ', 'ಮಾದ್ರಿ', 'ಸತ್ಯವತಿ', 'ಹೆಣ್ಣು' ಇತ್ಯಾದಿ ಪಾತ್ರಗಳ ವಿವೇಚನೆಯೊಂದಿಗೆ ವಿವರಿಸಲಾಗಿದೆ.

ಹೀಗೆ ಕಥನ ಕವನಗಳಲ್ಲಿ ವ್ಯವಸ್ಥೆಯೊಳಗಡೆ ಹೆಣ್ಣು ಅನುಭವಿಸುವ ಕಷ್ಟಗಳು ಸೂಕ್ಷ್ಮವಾಗಿ ಚಿತ್ರಿತವಾಗಿದೆ. ಅದರೆ ದಾಂಪತ್ಯದಲ್ಲಿ, ವಂಶಾಭಿವೃದ್ಧಿಯಲ್ಲಿ ಹೆಣ್ಣು ಹೀಗೇಯೇ ಇರಬೇಕೆಂಬ ಸಾಂಪ್ರದಾಯಿಕ ನಿಲುವುಗಳನ್ನು ಗುರುತಿಸಲಾಗಿದೆ. ಕಥನಕವನಗಳಲ್ಲಿ ಹೆಣ್ಣಿನ ಪಾತ್ರವಲೋಕನ ಮಾಡಿದಾಗ ಯಾವುದೇ ಕಾರಣಕ್ಕೆ ಹೆಣ್ಣು ಮತ್ತೊಂದು ಗಂಡಿನ ಅಕ್ರಮಣವನ್ನು ಸಹಿಸಲಾರಳು, ಸಹಿಸುವುದಿಲ್ಲ ಎನ್ನುವ ಅಂಶವನ್ನು ಗಮನಿಸಲಾಗಿದೆ.

"ಕಡೆಂಗೋಡ್ಲು ಕಥನ ಕವನಗಳಲ್ಲಿ ಮೌಲ್ಯಗಳ ವಿವೇಚನೆ" ಎಂಬ ನಾಲ್ಕನೇ ಅಧ್ಯಾಯದಲ್ಲಿ ಕಥನಕವನಗಳು ಬಿಂಬಿಸುವ ಮೌಲ್ಯಗಳನ್ನು ಅಧ್ಯಯನದ ದೃಷ್ಟಿಯಿಂದ ವ್ಯಕ್ತಿಗತ ಮೌಲ್ಯಗಳು, ಕೌಟುಂಬಿಕ ಮೌಲ್ಯಗಳು, ಸಾಮಾಜಿಕ ಮೌಲ್ಯಗಳು ಹಾಗೂ ಧಾರ್ಮಿಕ ಮೌಲ್ಯಗಳೆಂದು ಒಟ್ಟಾಗಿ ಜೀವನ ಮೌಲ್ಯಗಳನ್ನು ಆ ಮೂಲಕ ಕೃತಿ ನೀಡಿದ ಸಂದೇಶ-ಮೌಲ್ಯಗಳು ಬೀರಿದ ಪರಿಣಾಮಗಳನ್ನು ಸಂದರ್ಭೋಚಿತವಾಗಿ ಕಥನಕವನಗಳ ಹಿನ್ನೆಲೆಯೊಂದಿಗೆ ಅಧ್ಯಯನ ಮಾಡಲಾಗಿದೆ. ಮೌಲ್ಯಗಳೇ ಕೃತಿಯ ಹಾಗು ಕವಿಯ ಮಹತ್ವವನ್ನು ಹೇಗೆ ಎತ್ತಿ ಹಿಡಿಯುವ ಅಂಶಗಳು ಎನ್ನುವುದನ್ನು ಕಂಡುಕೊಳ್ಳಲಾಗಿದೆ.

ಕವಿಯ ಕಾಲಘಟ್ಟದಲ್ಲಿ ಸುಧಾರಣಾವಾದಿ ಕಾದಂಬರಿಗಳು, ಕೃತಿಗಳು ರಚನೆಗೊಂಡು ಹೆಣ್ಣಿಗೆ ಪ್ರಾಧಾನ್ಯ ದೊರೆತರೂ, ಕಡೆಂಗೋಡ್ಲು ಅವರ ಕೃತಿಗಳಲ್ಲಿ ಹೆಣ್ಣನ್ನು ಕುರಿತ ಸಮಾಜಿಕ ದೃಷ್ಟಿಯಲ್ಲಿ ಬದಲಾವಣೆಯಿಲ್ಲ. ಸಾಂಪ್ರದಾಯಿಕವಾದ ದೃಷ್ಟಿಕೋನ ಹೆಣ್ಣನ್ನು ಕುರಿತು ಬೆಳೆದಿದೆ ಎಂಬ ಅಂಶವನ್ನು ಕಥನ ಕವನಗಳ ಆಧಾರದಲ್ಲಿ ಕಂಡುಕೊಳ್ಳಲಾಗಿದೆ.

ಅಧ್ಯಾಯ ಐದು – ಕಡೆಂಗೋಡ್ಲು ಕಥನಕವನಗಳ ಭಾಷೆ-ತಂತ್ರಗಳು-ಈ ಅಧ್ಯಾಯದಲ್ಲಿ ತಮ್ಮ ಕಥನಕವನಗಳ ಮೂಲಕ ಕವಿ ಸರಳ ಭಾಷೆಯಲ್ಲಿ ಸಂಕೀರ್ಣವಾದುದನ್ನೇ ಹೇಳುವ ಪ್ರಯತ್ನ ಮಾಡಿರುವುದನ್ನು ವಿಶದೀಕರಿಸಲಾಗಿದೆ. ಕವಿಗೆ ಕಾವ್ಯ ಸೃಷ್ಟಿಯ ಬಗ್ಗೆ ಇದ್ದ ಖಚಿತವಾದ ನಿಲುವುಗಳನ್ನು ಕಂಡುಕೊಳ್ಳಲಾಗಿದೆ. ವಸ್ತುವಿನ ನಿರೂಪಣಾ ವಿಧಾನಕ್ಕೆ ಕವಿ ಕಥನ ಕ್ರಮವನ್ನು ಆರಿಸಿಕೊಂಡ ಔಚಿತ್ಯವನ್ನು ತಿಳಿಯುವುದರೊಂದಿಗೆ, ತಮ್ಮ ಕಥನ ಕವನಗಳಲ್ಲಿ ಸಂಭಾಷಣೆಯ ಮೂಲಕ ಕವಿತೆಯನ್ನು ನಡೆಸಲು ಕವಿ ಯತ್ನಿಸಿದ್ದು ಗಮನಿಸಲಾಗಿದೆ.

ಭಾಷಾ ಬಳಕೆ ಮತ್ತು ಅನುಭವ ನಿವೇದನೆಯಲ್ಲಿ ಕವಿಯ ವೈಯಕ್ತಿಕ ನೆಲೆಯ ಅನುಭವ ಸಾಮಾಜಿಕವಾಗುತ್ತದೆ ಎನ್ನುವುದನ್ನು ಮನಗಾಣಲಾಗಿದೆ.

ನವೋದಯಕಾಲದ ಭಾಷೆ ಎನ್ನಬಹುದಾದ ಸರಳ ಸಹಜ, ಲಯ, ಗೇಯತೆ ಮಾಧುರ್ಯಗಳನ್ನು ಕವಿ ತನ್ನ ಕಥನ ಕವನಗಳಲ್ಲಿ ಹೇಗೆ ಬಿಂಬಿಸಿದ್ದಾರೆ ಎನ್ನುವುದನ್ನು ಕಥನಕವನಗಳ ಛಂದಸ್ಸು, ಅವುಗಳಲ್ಲಿ ಬಳಕೆಯಾದ ಷಟ್ಪದಿ, ಭಾಷೆಯ ಶೈಲಿ, ನಿರೂಪಣಾ ಕ್ರಮ, ಪ್ರಾಸ, ಭಾಷಾಬಳಕೆ ಇತ್ಯಾದಿ ಅಂಶಗಳನ್ನು ವಿವರಿಸುವುದರೊಂದಿಗೆ ಕೃತಿಯ ವಿಶೇಷತೆ ಏನು ಎನ್ನುವುದನ್ನು ಕಂಡು ಹಿಡಿಯಲಾಗಿದೆ.

ಒಟ್ಟಂದದಲ್ಲಿ ಬದುಕಿನ ಬಹುಪಾಲು ಮಜಲುಗಳನ್ನು ಸ್ಪರ್ಶಿಸುವ ಕವಿ ಕಡೆಂಗೋಡ್ಲು ಶಂಕರ ಭಟ್ಟರ ಕಾವ್ಯದ ನೆಲೆ ಬೆಲೆಯನ್ನು ಗುರುತಿಸುವ ಸಂದರ್ಭದಲ್ಲಿ ಅವರ ಭಾಷೆ ಅಭಿವ್ಯಕ್ತಿ-ಛಂದಸ್ಸು, ಮತ್ತಿತರ ಪೂರಕ ಅಂಶಗಳನ್ನು ಗ್ರಹಿಸಲು ಯತ್ನಿಸಲಾಗಿದೆ.

ಇದರೊಂದಿಗೆ ವಸ್ತು ವಿವರ ನಿರ್ವಹಣೆ, ನಿರೂಪಣೆಯ ಸಂಯಮದಿಂದಲೂ, ಭಾಷಾ ಬಳಕೆಯ ಜಾಣ್ಮೆಯಿಂದಲೂ ಕಡೆಂಗೋಡ್ಲು ಶಂಕರ ಭಟ್ಟರ ಕಲಾತ್ಮಕ ಸಿದ್ಧಿಯನ್ನು ಪಡೆದಿವೆ ಎಂದು ಗುರುತಿಸಲಾಗಿದೆ.

## ಪರಾಮರ್ಶನ ಗ್ರಂಥಗಳು:-


೧) ಅನಂತನಾರಾಯಣ ಎಸ್. ೧೯೬೨ ಹೊಸಗನ್ನಡ ಕವಿತೆಯ ಮೇಲೆ ಇಂಗ್ಲೀಷ್ ಕಾವ್ಯದ ಪ್ರಭಾವ, ಡಿ.ವಿ.ಕೆ ಮೂರ್ತಿ, ಮೈಸೂರು

೨) ಆಧುನಿಕ ಕನ್ನಡ ಕವನಗಳು ೨೦೦೬ ಕನ್ನಡ ಸಾಹಿತ್ಯ ಪರಿಷತ್ತು ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ ಬೆಂಗಳೂರು – ೮

೩) ಉಷಾ ಎಂ., ೨೦೦೪ ಮಹಿಳಾ ಚಳುವಳಿಗಳು ಮತ್ತು ಮಹಿಳಾ ವಿಷಯಗಳು ಪ್ರಸಾರಾಂಗ – ಕನ್ನಡ ವಿಶ್ವವಿದ್ಯಾಲಯ – ಹಂಪಿ

೪) ಕಡೆಂಗೋಡ್ಲು ಶಂಕರ ಭಟ್ಟ ೧೯೩೨ 'ನಲ್ಮೆ' ಕಥನ ಕವನ ಸಂಕಲನ ಸತ್ಯಶೋಧನ ಪ್ರಕಾಶನ ಮಂದಿರ ಬೆಂಗಳೂರು

೫) ಕಡೆಂಗೋಡ್ಲು ಶಂಕರ ಭಟ್ಟ ಭೂತಾಳ ಪಾಂಡ್ಯ ಕಡೆಂಗೋಡ್ಲು ಸಾಹಿತ್ಯ ಸಂಪಾದಕರು ವಿವೇಕ ರೈ ಬಿ.ಎ. ಕನ್ನಡ ವಿಭಾಗ – ಮಂಗಳೂರು ವಿಶ್ವವಿದ್ಯಾನಿಲಯ ೧೯೮೭

೬) ಕಡೆಂಗೋಡ್ಲು ಶಂಕರ ಭಟ್ಟ 'ಹೆಣ್ಣು ' ಕಥನಕವನ ನಡೆದು ಬಂದ ದಾರಿ ಭಾಗ ೧, ಮನೋಹರ ಗ್ರಂಥ ಮಾಲೆ

೭) ಕನ್ನಡ ಮನಸ್ಸು ಜೀವನ ಮೌಲ್ಯಗಳು ೨೦೧೧, ಆಳ್ವಾಸ್ ನುಡಿಸಿರಿ ೨೦೧೦, ಕನ್ನಡ ನಾಡುನುಡಿಯ ರಾಷ್ಟ್ರೀಯ ಸಮ್ಮೇಳನ ಸಮಗ್ರ ವಾಙ್ಮಯ ಸಂಪಾದಕರು ಮೋಹನ ಆಳ್ವ ಎಮ್. ಆಳ್ವಾಸ್ ಪ್ರಕಾಶನ ಮೂಡಬಿದಿರೆ

೮) ನಾವಡ ಎ.ವಿ. ೨೦೧೨, ನವೋದಯದ ಕೋಗಿಲೆ ಕಡೆಂಗೋಡ್ಲು ಶಂಕರ ಭಟ್ಟ ಕನ್ನಡ ಸಂಘ ಕಾಂತಾವರ

೯) ಪ್ರಭುಶಂಕರ ಕೃತಿಶೀಲ ೨೦೦೩ ಪ್ರಸಾರಾಂಗ – ಕನ್ನಡ ವಿಶ್ವವಿದ್ಯಾಲಯ – ಹಂಪಿ

೧೦) ಪಾಟೀಲ ಪುಟ್ಟಪ್ಪ ೨೦೦೧, ಬದುಕುವ ಮಾತು ಸಪ್ನಾ ಬುಕ್ ಹೌಸ್, ಬೆಂಗಳೂರು

೧೧) ಬಿಲಕಾರ ಎ.ಎಚ್. ೨೦೦೯, ಮೌಲ್ಯಾಧಾರಿತ ಶಿಕ್ಷಣ ವಿಜೇತ ಪ್ರಕಾಶನ – ಗದಗ

೧೨) ಮಹೇಶ್ವರಿ ಯು. ೨೦೦೧, ಇದು ಮಾನುಷಯ ಓದು ಶಿವರಾಮ ಕಾರಂತ ಅಧ್ಯಯನ ಕೇಂದ್ರ ವಿವೇಕಾನಂದ ಕಾಲೇಜು, ಪುತ್ತೂರು,

೧೩) ರಾಘವೇಂದ್ರ ರಾವ್ ಹೆಚ್. ಎಸ್. ೨೦೦೬, ನಮಸ್ಕಾರ ಸಾಹಿತ್ಯವಿಮರ್ಶೆ ಅಭಿನವ ವಿಜಯನಗರ ಬೆಂಗಳೂರು

೧೪) ವಾಙ್ಮಯ ತಪಸ್ವಿ ೧೯೭೭, ಕಡೆಂಗೋಡ್ಲು ಶಂಕರ ಭಟ್ಟ ಸ್ಮಾರಕ ಗ್ರಂಥ ಸಂಪಾದಕರು ನಾವಡ ಎ.ವಿ. ಡಿ.ವಿ.ಕೆ ಮೂರ್ತಿ, ಮೈಸೂರು

೧೫) ಸತ್ಯನಾರಾಯಣ ಮಲ್ಲಿಪಟ್ಟಣ ೧೯೯೯, ದಕ್ಷಿಣ ಕನ್ನಡದ ಕಾವ್ಯ ಮತ್ತು ಪ್ರಾದೇಶಿಕತೆ ಪ್ರಸಾರಾಂಗ – ಮಂಗಳೂರು ವಿಶ್ವವಿದ್ಯಾನಿಲಯ

೧೬) ಸಾವಿತ್ರಿ ಕೆ. ೨೦೧೧, ಮೌನ ಮುರಿದಾಗ ವಿಶ್ವದ ನೂರು ಮಹಿಳೆಯರ ಕುರಿತು ಲೇಖನಗಳು ಸಿರಿವರ ಪ್ರಕಾಶನ – ಬೆಂಗಳೂರು

೧೭) ಸ್ವಾಮಿ ಜಗದಾತ್ಮಾನಂದ ೧೯೮೧, ಬದುಕಲು ಕಲಿಯಿರಿ, ಶ್ರೀ. ರಾಮಕೃಷ್ಣ ಮಿಷನ್ ಮೈಸೂರು.